Aug 95

**ತಿಂಗಳ ಪತ್ರಿಕೆ** ಆಗಸ್ಟ್ 1995



- ಸಾರಾಯಿ ಮತ್ತು ಸಾರಾಯಿಯ ವಿರುದ್ಧದ ಹೋರಾಟಗಳು
- ಎತಿಲ್ ಲ್ಯಾಂಬರ್ಟ್

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 3

ಆಗಸ್ಟ್ - 1995

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ಸಹ ಸಂಪಾದಕರು :**

ವನಜಾ ವೆಂ.
ಡಾ॥ ಪ್ರಭಾವತಿ ಎಸ್. ವಿ.

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

**ಕರ್ನಾಟಕದಲ್ಲಿ** ಮುಂದಿನ ಸಾಲಿನಲ್ಲಿ ಸೇಂದಿ ಮಾರಾಟಕ್ಕೆ ನಿಷೇಧ ಹೇರುವುದಾಗಿ ಅಬ್ಕಾರಿ ಸಚಿವರ ಹೇಳಿಕೆ ಇತ್ತೀಚೆಗೆ ಪ್ರಕಟವಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಹಲವು ಮಹಿಳಾ ಸಂಘ ಸಂಸ್ಥೆಗಳು ಈ ಬಾರಿಯ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ತಮ್ಮ ಹಲವು ಬೇಡಿಕೆಗಳೊಂದಿಗೆ ಪಾನನಿಷೇಧದ ಜಾರಿಗಾಗಿ ಸರಕಾರವನ್ನು ಒತ್ತಾಯಿಸಿದ್ದವು. ಮೈಸೂರಿನ 'ಸಮತಾ' ಪ್ರಗತಿಪರ ಮಹಿಳಾ ವೇದಿಕೆ, ಕರ್ನಾಟಕ ಮಹಿಳಾ ವೇದಿಕೆಯಡಿ ರಾಜ್ಯದ ಹಲವು ಸಂಘ-ಸಂಸ್ಥೆಗಳು, ಮೈಸೂರಿನ ಮಹಿಳೋದಯ ಮಹಿಳಾ ಒಕ್ಕೂಟ ಮುಂತಾದವು ಇದೇ ಬೇಡಿಕೆಯನ್ನು ಮುಂದಿಟ್ಟುಕೊಂಡು ಸಹಿ ಸಂಗ್ರಹ, ಮೆರವಣಿಗೆ ಮುಂತಾದ ವಿಧಾನಗಳಿಂದ ಸರಕಾರದ ಮೇಲೆ ಒತ್ತಡ ಹೇರಲು ಪ್ರಯತ್ನಿಸಿದ್ದವು. ರಾಜಧಾನಿ ಬೆಂಗಳೂರಿನಲ್ಲಿ ನಡೆದ ರಾಜ್ಯ ಮಟ್ಟದ ಮಹಿಳಾ ಸಮಾವೇಶದಲ್ಲೂ ಈ ಬೇಡಿಕೆಯನ್ನು ಮುಂದಿಡಲಾಗಿತ್ತು. ಇತ್ತೀಚೆಗೆ ಪಕ್ಕದ ರಾಜ್ಯವಾದ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ತಮ್ಮ ರಾಜ್ಯದಲ್ಲಿ ಪಾನನಿಷೇಧ ಜಾರಿಗೆ ತಂದಿರುವುದನ್ನು ಪ್ರಸ್ತಾಪಿಸುತ್ತಾ ಕರ್ನಾಟಕದಲ್ಲೂ ಅದರ ಅಗತ್ಯವಿದೆಯೆನ್ನುವುದನ್ನು ಗಮನಿಸಿದ್ದರು.

ಕೆಲವು ತಿಂಗಳ ಹಿಂದೆ ಸಾಕ್ಷರತಾ ಕಾರ್ಯಕ್ರಮದೊಂದಿಗೇ ಹುಟ್ಟಿಕೊಂಡಿತೆನ್ನಲಾದ ಪಾನವಿರೋಧೀ ಚಳುವಳಿ ಮೈಸೂರು ಜಿಲ್ಲೆಯ ಹಳ್ಳಿಗಳಿಂದ ವರದಿಯಾಗಿತ್ತಲ್ಲದೆ, ಕೆಲವೇ ದಿನಗಳ ಹಿಂದೆ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕಿನ ಹೋಬಳಿಯೊಂದರ ಏಳು ಹಳ್ಳಿಗಳಲ್ಲಿ ಸಾರಾಯಿ ನಿಷೇಧ ಜಾರಿಗೆ ತಂದಿರುವುದಾಗಿ ವರದಿಯಾಗಿದೆ. ಇದೇ ಜಿಲ್ಲೆಯ ಇನ್ನೂ ಹಲವು ಹಳ್ಳಿಗಳಲ್ಲಿ ಗ್ರಾಮಸ್ಥರೇ ನಿಷೇಧ ಹೇರಿರುವುದಾಗಿ ಸುದ್ದಿಯಾಗಿದೆ.

ಪಾನನಿಷೇಧದ ಚಳುವಳಿಗಳು ಭಾರತದಲ್ಲಿ ಇಂದು ನಿನ್ನೆಯದಲ್ಲ. ಸ್ವಾತಂತ್ರ್ಯಪೂರ್ವದಿಂದಲೂ ರಾಷ್ಟ್ರದ ಹಲವೆಡೆ ಮದ್ಯಪಾನ ವಿರೋಧೀ ಹೋರಾಟಗಳು ನಡೆಯುತ್ತಾ ಬಂದಿವೆ. ಕಾರಣ, ಬ್ರಿಟಿಷರ ಕಾಲದಿಂದ ಹಾಗೂ ನಂತರದಲ್ಲಿ ಬಂದ ಸರಕಾರಗಳು ಸಾರಾಯಿ ಮಾರಾಟವನ್ನು ಆದಾಯ ಮೂಲವೆಂದು ಕಂಡುಕೊಂಡಿದ್ದುದು ಮಾತ್ರವಲ್ಲದೆ ಸಾರಾಯಿ ತಯಾರಿಕೆ ಮತ್ತು ಮಾರಾಟಕ್ಕೆ ಪರವಾನಗಿ ನೀಡುವ ಮೂಲಕ ಮದ್ಯಪಾನವನ್ನು ಉತ್ತೇಜಿಸುತ್ತಾ ಬಂದಿರುವುದು.

ಮದ್ಯ ಸೇವನೆಯ ದುಷ್ಚಟಕ್ಕೆ ಬಲಿಯಾಗುವವರು ಹೆಚ್ಚಾಗಿ ಪುರುಷರೇ ಆದರೂ ಅದರ ಕೆಟ್ಟ ಪರಿಣಾಮಗಳು ಮಹಿಳೆಯರು ಮತ್ತು ಮಕ್ಕಳ ಮೇಲೆ

ಆಗುತ್ತಿರುವುದು ಈ ದಿಕ್ಕಿನಲ್ಲಿ ನಡೆದ ಅಧ್ಯಯನಗಳಿಂದ ತಿಳಿದುಬಂದಿರುವ ಅಂಶ. ಇತ್ತೀಚಿನ ವರ್ಷಗಳಲ್ಲಿ ಮದ್ಯಸೇವನೆಯ ಚಟಕ್ಕೆ ಬಲಿಯಾಗುತ್ತಿರುವವರ ಸಂಖ್ಯೆ ದಿನೇದಿನೇ ಹೆಚ್ಚುತ್ತಿದ್ದು ಮಹಿಳೆಯರ ಎಲ್ಲಾ ವಿಧದ ಶೋಷಣೆ, ಹಿಂಸೆಗಳಿಗೆ ಕಾರಣವಾಗಿದೆಯೆನ್ನುವುದು ನಿಜವಾಗಿಯೂ ಆತಂಕದ ವಿಚಾರ. ಇದರ ಬಗೆಗಿನ ಅರಿವು ಮಹಿಳೆಯರಲ್ಲಿ ಹೆಚ್ಚುತ್ತಿರುವುದು ಇಂಥ ಚಳುವಳಿಗಳ ಮೂಲಕ ವ್ಯಕ್ತವಾಗುತ್ತಿದೆಯೆನ್ನಬಹುದಾಗಿದೆ. ಆದರೆ ಇಂಥ ಚಳುವಳಿಗಳು ತಮ್ಮ ಗುರಿಯನ್ನು ತಲುಪಲು ಕೆಲವು ಕಡೆ ಸಾಧ್ಯವಾಗಿದ್ದರೆ, ಇನ್ನು ಕೆಲವು ಕಡೆ ಸಾಧ್ಯವಾಗಿಲ್ಲದಿರುವುದನ್ನು ಕಾಣುತ್ತಿದ್ದೇವೆ.

ಇಂದಿನ ಸರಕಾರದ ಈ ನಿರ್ಧಾರದಿಂದ ರಾಜ್ಯದ ಬೊಕ್ಕಸಕ್ಕೆ 500 ಕೋಟಿ ರೂಪಾಯಿಗಳ ಆದಾಯ ಕಡಿತಗೊಳ್ಳುವುದೆಂದು ಅಂದಾಜು ಮಾಡಲಾಗಿದೆ. ಆದರೆ ಅದನ್ನು ತುಂಬಿಕೊಳ್ಳಲು ಹಲವು ವಿಧಾನಗಳನ್ನು ಕಂಡುಕೊಳ್ಳುವ ಭರವಸೆಯನ್ನೂ ಸರಕಾರ ಹೊಂದಿದೆ. ಹೀಗೆ ತುಂಬಿಕೊಳ್ಳುವ ಪ್ರಯತ್ನದಲ್ಲಿ ಯಶಸಿಗಲಿ, ಬಿಡಲಿ, ಈ ನಿರ್ಧಾರ ಬಡಜನರ, ಅದರಲ್ಲೂ ಮಹಿಳೆಯರ ಪರವಾದುದೆನ್ನುವುದನ್ನು ಯಾರೂ ಮರೆಯಲಾಗದು. ಆದರೆ ಕೇವಲ ಕಾನೂನಿನಿಂದಲೇ ಏನನ್ನೂ ಸಾಧಿಸಲಾಗದು. ಆ ಕಾನೂನಿನ ಜಾರಿಗೊಳಿಸುವಿಕೆಯ ಬಗ್ಗೆ ಸರಕಾರದ ಪ್ರಾಮಾಣಿಕ ಪ್ರಯತ್ನವೂ ಅಗತ್ಯ ಎನ್ನುವುದನ್ನು ಈ ಸಂದರ್ಭದಲ್ಲಿ ನೆನಪಿಸಬೇಕಾಗಿದೆ.

ಇದುವರೆಗೆ ಬಡಜನರ ಕಲ್ಯಾಣ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಲೇ ಇನ್ನೊಂದೆಡೆ ಅವರ ದುಡಿಮೆಯ ಬಹುಪಾಲು ಸಾರಾಯಿಗಾಗಿ ಸೋರಿ ಹೋಗಲು ಅವಕಾಶಗಳಿದ್ದು ಇನ್ನು ಮುಂದೆ ಈ ಸೋರುವಿಕೆ ಕಡಿಮೆಯಾಗುವ ಭರವಸೆಯೊಂದಿಗೆ, ಎಷ್ಟೋ ಕುಟುಂಬಗಳಲ್ಲಿ ಹಸಿವು, ದಾರಿದ್ರ್ಯ, ಅನಾರೋಗ್ಯ, ಹಿಂಸೆಯ ಬದಲಿಗೆ ಆರೋಗ್ಯ, ನೆಮ್ಮದಿ, ಶಾಂತಿ ನೆಲೆಸಬಹುದೆಂಬ ಆಶಾಭಾವನೆಯಿಂದಿರೋಣವೆ ?

ಪ್ರಿಯ ಓದುಗರೇ,

ಕಳೆದ ಕೆಲ ತಿಂಗಳುಗಳಲ್ಲಿ 'ಮಾನಸ' ಪ್ರಕಟಗೊಳ್ಳಲಿಲ್ಲ. ತುಂಬಾ ಅನಿವಾರ್ಯ ಒತ್ತಡಗಳಿಂದ ಉಂಟಾದ ಈ ಅನಾನುಕೂಲಕ್ಕೆ ತೀವ್ರವಾಗಿ ವಿಷಾದಿಸುತ್ತೇವೆ. ಚಂದಾದಾರರಿಗೆ ತೊಂದರೆಯಾಗದಿರಲೆಂಬ ಕಾರಣಕ್ಕೆ ಒಂದು ಸೂಚನೆ. 'ಮಾನಸ' ಪ್ರಕಟಗೊಳ್ಳದೇ ಇದ್ದ ತಿಂಗಳುಗಳಲ್ಲಿ ಚಂದಾ ನೀಡಿದ ಎಲ್ಲ ಓದುಗರ ಚಂದಾವನ್ನು ಈ ತಿಂಗಳು, ಅಂದರೆ ಆಗಸ್ಟ್‌ನಿಂದ ಪ್ರಾರಂಭವಾಗುವಂತೆ ಪರಿಗಣಿಸಿಕೊಳ್ಳಲಾಗುತ್ತದೆ. ಇಲ್ಲಿಂದ ಹನ್ನೊಂದು ಸಂಚಿಕೆಗಳು ತಲುಪಿದ ನಂತರ ನೀವು ನವೀಕರಿಸಿದರೆ ಸಾಕು. ತಮ್ಮ ಬೆಂಬಲ, ಪ್ರೋತ್ಸಾಹ 'ಮಾನಸ'ಕ್ಕೆ ಹೀಗೆಯೇ ಇರಲೆಂದು ಆಶಿಸುತ್ತೇವೆ.

**–ಸಂ.ಮಂ.**

# ಆಂಧ್ರಪ್ರದೇಶದಲ್ಲಿ ಮಧ್ಯಪಾನ ನಿಷೇಧ-ಒಂದು ಹೋರಾಟದ ಕಥೆ

ಗರವಾಲ್ ಪ್ರದೇಶದ ಚಿಪ್ಕೊ ಚಳುವಳಿಯಂತೆ ಆಂಧ್ರಪ್ರದೇಶದ ಮಧ್ಯಪಾನ ವಿರೋಧೀ ಹೋರಾಟ ಒಂದು ಐತಿಹಾಸಿಕ ಚಳುವಳಿ. ನೆಲ್ಲೂರು ಜಿಲ್ಲೆಯ ದುಬಗುಂಟ ಗ್ರಾಮದ ನವಸಾಕ್ಷರ ಮಹಿಳೆಯರು ವಯಸ್ಕರ ಶಿಕ್ಷಣ ಪಠ್ಯಪುಸ್ತಕದಲ್ಲಿದ್ದ ಪಾಠವೊಂದರಿಂದ ಸ್ಫೂರ್ತಿ ಪಡೆದು ಮದ್ಯಪಾನ ವಿರೋಧೀ ಹೋರಾಟದಲ್ಲಿ ತೊಡಗಿಸಿಕೊಂಡರು. ಈ ಚಳುವಳಿ ಮುಂದೆ ಕಾಳ್ಗಿಚ್ಚಿನಂತೆ ರಾಜ್ಯಾದ್ಯಂತ ಹರಡಿ ಅಂದಿನ ಸರ್ಕಾರವನ್ನು ನಡುಗಿಸಿತು. ಪರಿಣಾಮವಾಗಿ, ಇಂದು ಆಂಧ್ರಪ್ರದೇಶದಲ್ಲಿ ಪಾನ ನಿಷೇಧ ಜಾರಿಗೆ ಬಂದಿದೆ. ಇತರ ರಾಜ್ಯಗಳ ಮಹಿಳೆಯರಿಗೆ ಪಾನ ನಿಷೇಧಕ್ಕಾಗಿ ಹೋರಾಟ ಆರಂಭಿಸುವಲ್ಲಿ ಇಂದು ಸ್ಫೂರ್ತಿಯಾಗಿರುವ ಹೋರಾಟದ ಕಥೆ ಇಲ್ಲಿದೆ.

ಮದ್ಯಪಾನದ ವಿರುದ್ಧದ ಹೋರಾಟಕ್ಕೆ ಸಿದ್ಧರಾದ ಮಹಿಳೆಯರ ಮುಂದಾಳತ್ವದಲ್ಲಿ ಉಂಟಾದ ಸಾಮಾಜಿಕ ಗೊಂದಲಕ್ಕೆ ವಿಜಯಭಾಸ್ಕರ ರೆಡ್ಡಿಯ ಸಹಕಾರ ಸಾಕ್ಷೀಭೂತವಾಯಿತು. 1993ರ ಆಗಸ್ಟ್ ತಿಂಗಳಲ್ಲಿ ಸಂಪೂರ್ಣ ಪಾನ ನಿರೋಧಕ್ಕಾಗಿ ಆರಂಭವಾದ ಚಳುವಳಿ ರಾಜ್ಯ ವಿಧಾನ ಸಭೆಯ ಚುನಾವಣೆ ಹತ್ತಿರವಾಗುತ್ತಿದ್ದಂತೆಯೇ ಒಂದು ಮುಖ್ಯ ಚಳುವಳಿಯಾಗಿ ಪರಿವರ್ತಿತವಾಗುವ ಬೆದರಿಕೆ ಉಂಟುಮಾಡಿತು. ಇದಕ್ಕೆ ಎರಡು ವರ್ಷಗಳ ಹಿಂದೆ ನೆಲ್ಲೂರು ಜಿಲ್ಲೆಯ ದುಬಗುಂಟ ಗ್ರಾಮದ ಅನಕ್ಷರಸ್ಥ ಮಹಿಳೆಯರು ಪಾನನಿಷೇಧ ಚಳುವಳಿಯನ್ನು ಯಶಸ್ವಿಯಾಗಿ ನಡೆಸಿದ್ದರು. ಅದರ ಫಲವಾಗಿ, ವಿಜಯಭಾಸ್ಕರರೆಡ್ಡಿ ಸರಕಾರ 1993ರಲ್ಲಿ ಅಕ್ಟೋಬರ್ ತಿಂಗಳಿಂದ ಕಳ್ಳಭಟ್ಟಿಯ ಮೇಲೆ ನಿಷೇಧ ಹೇರಿತ್ತು.

ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಮಹಾತ್ಮ ಗಾಂಧೀಜಿಯವರ ಅನುಯಾಯಿಗಳಾಗಿ ತಮ್ಮ ಸಮಗ್ರ ವ್ಯಕ್ತಿತ್ವಕ್ಕೆ ಹೆಸರಾದ ವವಿಲಾಲ ಗೋಪಾಲ ಕೃಷ್ಣಯ್ಯನವರು ಸರಕಾರ ನೇಮಕ ಮಾಡಿದ ಪಾನ ನಿರೋಧ ಪ್ರಚಾರ ಸಮಿತಿಗೆ ರಾಜೀನಾಮೆ ಸಲ್ಲಿಸಿ ಸಂಪೂರ್ಣ ಪಾನನಿರೋಧಕ್ಕಾಗಿ ಪ್ರಚಾರ ಮಾಡಲಾರಂಭಿಸಿದರು.

ರಾಜ್ಯದಲ್ಲಿ ಈ ಮೊದಲ ಹೋರಾಟದ ಅವಧಿಯಲ್ಲಿ ರೂಪುಗೊಂಡಿದ್ದ ಮಹಿಳಾ ಸಂಘ ಆ ಕೂಡಲೆ ಕಾರ್ಯೋನ್ಮುಖವಾಯಿತು. 'ಸಂಯುಕ್ತ ವೇದಿಕೆ'ಗಳು ಎಂದು ಕರೆಸಿಕೊಂಡ ಇವುಗಳಲ್ಲಿ ಗ್ರಾಮೀಣ ಮಹಿಳೆಯರೇ ಹೆಚ್ಚಾಗಿದ್ದರು. ಈ ವೇದಿಕೆಗಳು 'ಮದ್ಯರಹಿತ ಸಮಾಜ' (liquorlesssociety) ಕ್ಕಾಗಿ ಹೋರಾಟಕ್ಕಿಳಿದವು. ಧರಣಿ, ಮೆರವಣಿಗೆ ಮತ್ತು ಸಭೆಗಳನ್ನು ನಡೆಸಿದವು.

1992ರಲ್ಲಿ ದುಬಗುಂಟದ ಮಹಿಳೆಯರು ಪಾನ ನಿಷೇಧವನ್ನು ಜಾರಿಗೊಳಿಸಬೇಕೆಂಬ ತಮ್ಮ ಬೇಡಿಕೆಯೊಂದಿಗೆ ಬೀದಿಗಿಳಿದು ತಮ್ಮ ಅಚಲ ನಿರ್ಧಾರ ಪ್ರದರ್ಶಿಸಿದಾಗ ಚಳುವಳಿ ಕಾಳ್ಗಿಚ್ಚಿನಂತೆ ಎಲ್ಲೆಡೆ ವ್ಯಾಪಿಸತೊಡಗಿತು. ಹಳ್ಳಿಹಳ್ಳಿಗಳಲ್ಲಿ ಜನರು ತಮಗೆ ತಾವೇ ಪಾನ ನಿರೋಧವನ್ನು ಘೋಷಿಸಿಕೊಂಡರು. ಸರಕಾರ ಮೊದಮೊದಲು ತನ್ನ ನಿರ್ಲಿಪ್ತ ಮನೋಭಾವನೆಯನ್ನು ತೋರ್ಪಡಿಸಿಕೊಂಡರೂ ಅನಂತರ ದಮನಕಾರಿಯಾಗಿ ಪರಿವರ್ತಿತವಾಯಿತು. ಒಂದು ವರ್ಷದ ಸತತ ಹೋರಾಟದ ನಂತರ ಹೆಂಡದ ಮೇಲೆ ನಿಷೇಧವನ್ನು ಹೇರಲಾಯಿತು.

ಒಲ್ಲದ ಮನಸ್ಸಿನಿಂದ ಈ ಕ್ರಮ ಕೈಗೊಂಡ ಸರಕಾರ ಅದನ್ನು ಜಾರಿಗೊಳಿಸುವ ವಿಷಯದಲ್ಲಿ ಹೆಚ್ಚಿನ ಆಸಕ್ತಿ ತೋರಿಸಲಿಲ್ಲ. ಕಳ್ಳಭಟ್ಟಿಯ ಬಳಕೆಯಿಂದಾಗಿ ಅನೇಕರು ಸಾವಿಗೀಡಾದರು. ಅಧಿಕಾರದಲ್ಲಿದ್ದ ಪಕ್ಷದ ದೊಡ್ಡ ಕುಳಗಳು ಕಾನೂನುಬಾಹಿರವಾದ ಮದ್ಯ ತಯಾರಿಕೆಯಲ್ಲಿ ತೊಡಗಿರುವವರೊಡನೆ ಸಂಪರ್ಕ ಹೊಂದಿದ್ದರು. ಹಳ್ಳಿಗಳಲ್ಲಿ ಯಾವುದೇ ನಿರ್ಬಂಧವಿಲ್ಲದೆ ಹರಿಯುತ್ತಿದ್ದ ಮಧ್ಯದ ಮಾರಾಟದಲ್ಲಿ ಅವರ ಕೈವಾಡವಿತ್ತು. ಇದೇ ಸಂದರ್ಭವನ್ನು ತನ್ನ ರಾಜಕೀಯ

ಲಾಭಕ್ಕಾಗಿ ಬಳಸಿಕೊಳ್ಳಲು ಸರಕಾರ ಹವಣಿಸಿತ್ತು. ರಾಜ್ಯದಾದ್ಯಂತ ದೊಡ್ಡ ಪ್ರಮಾಣದ ಹೆಂಡದ ಅಡಗು ತಾಣಗಳ ಮೇಲೆ ಧಾಳಿ ನಡೆಯಿತು. ಈ ಕ್ರಿಯೆ ಯನ್ನು ಮುಖ್ಯಮಂತ್ರಿಗಳ ದಿಟ್ಟ ಹೆಜ್ಜೆ ಎಂಬ ಭಾವನೆ ಉಂಟುಮಾಡಲು ಬಳಸಿಕೊಳ್ಳಲಾಯಿತು.

ಅಬ್ಕಾರಿ ಇಲಾಖೆಯ ಅಧಿಕಾರಿಗಳೇ ಕಾನೂನು ಬಾಹಿರ ಮಧ್ಯ ಮಾರಾಟಗಾರರು, ತಯಾರಕರೊಂದಿಗೆ ಶಾಮೀಲಾಗಿದ್ದಾರೆಂಬ ಆರೋಪಗಳೂ ಇದ್ದವು. ಇದರಿಂದಾಗಿ ಅಬಕಾರಿ ಇಲಾಖೆಯಿಂದ ಯಾವುದೇ ಬೆಂಬಲ ದೊರಕದಾಗ ಪೋಲೀಸು ಇಲಾಖೆಯಿಂದ ಹೆಚ್ಚಿನದೇನನ್ನೂ ನಿರೀಕ್ಷಿಸುವಂತಿರಲಿಲ್ಲ.

ಮೊದಲಿಗೆ ಸರಕಾರ ಕಾನೂನುಬಾಹಿರವಾದ ಸ್ಥಳೀಯ ಮಧ್ಯದ ನಿಷೇಧಕ್ಕೆ ವಿರುದ್ಧವಾಗಿತ್ತು. ಇದಕ್ಕೆ ಕೊಟ್ಟ ಕಾರಣವೆಂದರೆ, ಮಧ್ಯ ಮಾರಾಟದಿಂದ ಬರುವ ಅಬಕಾರಿ ಸುಂಕದ ಮೊತ್ತ 600 ಕೋಟಿ ರೂಪಾಯಿ ಗಳಿದ್ದು ಅದನ್ನು ಭರಿಸುವುದು ಬೇರಾವುದೇ ಮೂಲ ದಿಂದ ಸಾಧ್ಯವಾಗದು ಎನ್ನುವುದೇ ಆಗಿತ್ತು. ಆದರೆ ಚತುರರಾದ ಅಧಿಕಾರಿಗಳು ಅಬಕಾರಿ ಸುಂಕ ಸಂಗ್ರಹದ ಇನ್ನೊಂದು ಮೂಲವನ್ನು ಕಂಡುಹಿಡಿದರು ! ಭಾರತ ದಲ್ಲೇ ತಯಾರಾದ ವಿದೇಶೀ ಮಧ್ಯ (Indian Made Foreign Liquor)ದ ಅಗ್ಗದ ಮಾಲುಗಳನ್ನು ಹಳ್ಳಿ ಗಳಿಗೆ ಒದಗಿಸುವ ಮೂಲಕ ಆದ ನಷ್ಟವನ್ನು ತುಂಬ ಲಾಯಿತು. ಆಂಧ್ರ ಪ್ರದೇಶ ಬ್ರಿವರೀಸ್ ಕಾರ್ಪೊರೇಷನ್ ಎಂಬ ರಾಜ್ಯ ಸರ್ಕಾರದ ಸಂಸ್ಥೆಯು ಕಳೆದ ಜನವರಿಯಿಂದ ಐಎಂಎಫ್‌ಎಲ್‌ನ ವಿತರಣಾ ವ್ಯವಸ್ಥೆಯನ್ನು ವಹಿಸಿಕೊಂಡಿತು. ಈ ವ್ಯವಸ್ಥೆ ಸದ್ಯದಲ್ಲೇ ಸಂಪೂರ್ಣ ಪಾನನಿಷೇಧವನ್ನು ಜಾರಿಗೆ ತರಲು ಸಹಾಯಕವಾಗುತ್ತದೆಂದು ಸರಕಾರ ಹೇಳಿ ಕೊಂಡಿತು. ಇದಕ್ಕೆ ವಿರುದ್ಧವಾಗಿ, ಹೊಸದಾದ ಅಗ್ಗದ ಮಾದರಿಯ ಮದ್ಯವನ್ನು ಪರಿಚಯಿಸುವುದು, ಮಧ್ಯದಂಗಡಿಗಳಿಗೆ ಹೆಚ್ಚು ಹೆಚ್ಚು ಲೈಸನ್ಸ್‌ಗಳನ್ನು ಕೊಡುವುದು ಹಾಗೂ ಐಎಂಎಫ್‌ಎಲ್‌ನ ಎಲ್ಲಾ ರೀತಿಯ ಮಧ್ಯಗಳ ಬೆಲೆ ಹೆಚ್ಚಿಸುವುದು ಮುಂತಾದ ಕ್ರಮಗಳಿಂದ ಸರಕಾರದ ಆದಾಯ ಹೆಚ್ಚಿತು. 1993ರ ಅಕ್ಟೋಬರ್ ತಿಂಗಳಲ್ಲಿ ಇದ್ದ 4031 ಮಧ್ಯದಂಗಡಿಗಳ ಸಂಖ್ಯೆ 1994 ಆಗಸ್ಟ್ ತಿಂಗಳಲ್ಲಿ 5605ಕ್ಕೆ ಏರಿತು.

ಮೂರು ಸಾವಿರ ಜನಸಂಖ್ಯೆ ಹೊಂದಿರುವ ಹಳ್ಳಿಗಳ ಲ್ಲೆಲ್ಲಾ ಮದ್ಯದಂಗಡಿಗಳನ್ನು ತೆರೆಯಲು ಸರಕಾರ ಅನುಮತಿ ನೀಡಿತು. ಕೊಠಾರಿ ಇಂಡಸ್ಟ್ರಿಯಲ್ ಕಾರ್ಪೊರೇಷನ್ನಿಗೆ ವಾರ್ಷಿಕ 50 ಲಕ್ಷ ಲೀಟರು ಬೀರು (Beer) ತಯಾರಿಸಲು ಅನುಮತಿ ನೀಡಿತು. ಇದರಿಂದಾಗಿ 1994ರ ಜನವರಿ ತಿಂಗಳಿಗೆ 80 ಕೋಟಿ ರೂಪಾಯಿಗಳ ವ್ಯವಹಾರ ಮಾಡುತ್ತಿದ್ದ ಕಾರ್ಪೊರೇಷನ್ ನವೆಂಬರ್ ತಿಂಗಳಲ್ಲಿ 120 ಕೋಟಿ ರೂಪಾಯಿಗಳ ವ್ಯವಹಾರ ನಡೆಸುವಂತಾಯಿತು.

ಈ ಅಂಕಿ ಅಂಶಗಳನ್ನು ಸರಕಾರ ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಅಲ್ಲದೆ ಪಾನನಿಷೇಧವನ್ನು ಜಾರಿಗೆ ತರುವ ಅಪೇಕ್ಷೆ ಸರಕಾರಕ್ಕೆ ಇರಲಿಲ್ಲ. ಕಾರಣ ಈ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಮಹಿಳೆ ಯರ್‍ಯಾರೂ ಜನತೆಗೆ ಮದ್ಯಪಾನದ ದುಷ್ಪರಿಣಾಮಗಳ ಬಗ್ಗೆ ತಿಳುವಳಿಕೆ ನೀಡಲು ನೇಮಕಗೊಂಡ ಸಮಿತಿಯಲ್ಲಿ ಇರಲಿಲ್ಲ.

ಸರಕಾರದ ನಡವಳಿಕೆಯನ್ನು ಗಮನಿಸಿದ ಮೇಲೆ ರಾಜ್ಯದ ಅನೇಕ ಮಹಿಳಾ ಸಂಘಸಂಸ್ಥೆಗಳು ಸಂಪೂರ್ಣ ಪಾನನಿಷೇಧಕ್ಕಾಗಿ ಕರೆಕೊಡಲು ಸಂಘಟಿತವಾದವು. ಆಂಧ್ರ ಪ್ರದೇಶ ವುಮೆನ್ಸ್ ಫೆಡರೇಷನ್, ಕಸ್ತೂರ ಬಾ ಮೆಮೊರಿಯಲ್ ಟ್ರಸ್ಟ್, ಮಹಿಳಾ ಮದ್ಯ ನಿಷೇಧ ಪರಿಷತ್, ಪ್ರೊಗ್ರೆಸಿವ್ ಆರ್ಗನೈಸೇಷನ್ ಫಾರ್ ವುಮೆನ್ ಮುಂತಾದ ಹಲವು ಮಹಿಳಾ ಸಂಘಟನೆಗಳನ್ನು ಪ್ರತಿ ನಿಧಿಸುವ 13 ಮಹಿಳೆಯರಿರುವ ರಕ್ಷಕ ದಳವನ್ನು (Presidium) ಚಳುವಳಿಯ ನಾಯಕತ್ವ ವಹಿಸುವ ದೃಷ್ಟಿಯಿಂದ ರಚಿಸಲಾಯಿತು. ರಾಜ್ಯದ ಪ್ರಭಾವಶಾಲಿ ವ್ಯಕ್ತಿಯಾದ ರಾಮೋಜಿರಾವ್ ಈ ಚಳುವಳಿಗೆ ಬೆಂಬಲ ಸೂಚಿಸಿದರು. ಸಂಪೂರ್ಣ ಪಾನನಿಷೇಧ ಹಾಗೂ ಮಧ್ಯ ಪಾನಕ್ಕೆ ಸಂಬಂಧಿಸಿದ ಪ್ರಕಟಣೆಗಳ ಮೇಲೆ ನಿಷೇಧ ಹಾಗೂ ಬರಲಿದ್ದ ಚುನಾವಣೆಯಲ್ಲಿ ಮದ್ಯದ ಮಾಲೀಕ ರಿಗೆ ಟಿಕೆಟ್ ನಿರಾಕರಣೆಯಂಥ ಬೇಡಿಕೆಯನ್ನು ಮುಂದಿ ಟ್ಟಿತು. ಮದ್ಯವ್ಯಾಪಾರಕ್ಕೆ ಸಂಬಂಧಿಸಿದವರೆಲ್ಲರ ಸೋಲಿಗೆ ಪ್ರಚಾರ ಮಾಡುವ ಪ್ರತಿಜ್ಞೆಯನ್ನು ರಕ್ಷಕದಳ ಮಾಡಿತು.

ಸೆಪ್ಟೆಂಬರ್ 24ರಂದು ಯುನೈಟೆಡ್ ಫೋರಂ ಫಾರ್ ಟೋಟಲ್ ಪ್ರಾಹಿಬಿಷನ್ನಿನ ಆಶ್ರಯದಲ್ಲಿ ನಡೆದ

ಬೃಹತ್ ರ್ಯಾಲಿಯಲ್ಲಿ ಮಹಿಳೆಯರ ಶಕ್ತಿಯ ಪ್ರದರ್ಶನ ವಾಯಿತು. "ಮದ್ಯಪಾನ ಪ್ರಿಯರು ನಿಮ್ಮಲ್ಲಿಗೆ ಬಂದು ಮತ ಕೇಳಿದರೆ ಪೊರಕೆಯಿಂದ ಹೊಡೆಯಿರಿ" ಎಂದು ಪ್ರೆಸಿಡಿಯಂನ ಸದಸ್ಯೆ ಮಲ್ಲು ಸ್ವರಾಜ್ಯಂ ಕರೆಕೊಟ್ಟರು. 'ಕ್ವಿಟ್ ಲಿಕ್ಕರ್' ಎನ್ನುವುದು ಮಹಿಳೆಯರ ಘೋಷಣೆ ಯಾಯಿತು.

ಅಕ್ಟೋಬರ್ 2, ಗಾಂಧಿಜಯಂತಿಯ ದಿನವನ್ನು ಪಾನನಿಷೇಧದ ದಿನ ಎಂದು ಆಯ್ಕೆಮಾಡಲಾಗಿತ್ತು. ಯಾವುದೇ ಪಕ್ಷದ ಯಾವನೇ ರಾಜಕಾರಣಿ ತಾನು ಪಾನ ನಿಷೇಧದ ಪರವಾಗಿದ್ದಾನೆಂದು ಘೋಷಿಸದಿದ್ದಲ್ಲಿ ಮಹಾತ್ಮ ಗಾಂಧೀಜಿಗೆ ನಮನ ಸಲ್ಲಿಸಲು ಬಿಡುವುದಿಲ್ಲ ಎಂದು ಮಹಿಳಾ ಸಂಘಟನೆಗಳು ಒಂದು ತಿಂಗಳಿಂದಲೂ ಬೆದರಿಕೆ ಹಾಕಿದ್ದವು. ಅದರಂತೆ ಸಿಕಂದರಾಬಾದಿನಲ್ಲಿ ಗಾಂಧೀ ಪ್ರತಿಮೆಯ ಬಳಿ ಅವರೆಲ್ಲಾ ದೊಡ್ಡ ಸಂಖ್ಯೆ ಯಲ್ಲಿ ನೆರೆದರು. ತೆಲುಗುದೇಶಂ ನಾಯಕ ಹಾಗೂ ಇಂದಿನ ಮುಖ್ಯಮಂತ್ರಿಯಾದ ಎನ್. ಟಿ. ರಾಮ ರಾಯರು ಇವರನ್ನು ಬೆಂಬಲಿಸಿದ ಕಾರಣ ಗಾಂಧೀ ಪ್ರತಿಮೆಗೆ ವಂದನೆ ಸಲ್ಲಿಸಲು ಅವಕಾಶ ನೀಡಿದರು. ಆದರೆ ಅಂದಿನ ಮುಖ್ಯಮಂತ್ರಿ ಬರುವ ಸಮಯ ಹತ್ತಿರವಾಗುತ್ತಲೇ ಮುದುಕರು-ಮಕ್ಕಳೆನ್ನದೆ ಮಹಿಳೆ ಯರನ್ನೆಲ್ಲಾ ಹೊಡೆದು ಬಡಿದು ಅಲ್ಲಿಂದ ಚದುರಿಸ ಲಾಯಿತು. ಈ ಘಟನೆ ಇಡೀ ರಾಜ್ಯದಲ್ಲಿ ಪ್ರತಿಭಟನೆ ಗೊಳಗಾಯಿತು. ಮಹಿಳೆಯರನ್ನು ವಿವೇಚನೆಯಿಲ್ಲದೆ ನಡೆಸಿಕೊಂಡ ಈ ಘಟನೆಯ ಬಗ್ಗೆ ಮುಖ್ಯಮಂತ್ರಿಯೂ ತಮ್ಮ ಅಸಮಧಾನವನ್ನು ವ್ಯಕ್ತಪಡಿಸಿದರೆಂದು ತಿಳಿದು ಬಂತು.

ಇಂಥ ಪೋಲೀಸ್ ದೌರ್ಜನ್ಯಗಳು ಮಹಿಳೆಯರನ್ನು ಬೆದರಿಸುವಲ್ಲಿ ನಿಷ್ಫಲವಾದವು. ಅಬಕಾರಿ ಕಛೇರಿಗಳು, ಬಾರ್‌ಗಳು ಹಾಗೂ ಮದ್ಯದಂಗಡಿಗಳ ಮುಂದೆ ಧರಣಿ ನಡೆಸುವುದನ್ನು ಅವರು ಮುಂದುವರೆಸಿದರು. ತೆಲುಗು ದೇಶಂ, ಬಿಜೆಪಿ ಹಾಗೂ ಎಡಪಕ್ಷಗಳು ಈ ಚಳುವಳಿಗೆ ತಮ್ಮ ಸಂಪೂರ್ಣ ಬೆಂಬಲವನ್ನು ವ್ಯಕ್ತಪಡಿಸಿದವು. ಎನ್.ಟಿ. ರಾಮರಾಯರು ಮಧ್ಯ ಮಾರಾಟಕ್ಕೆ ಸಂಬಂಧಿಸಿದಂತೆ ಟ್ರಕ್ಕುಗಳನ್ನು ಹೊಂದಿರುವ ಯಾರಿಗೇ ಆಗಲಿ ವಿಧಾನಸಭಾ ಚುನಾವಣೆಗೆ ತಮ್ಮ ಪಕ್ಷದ ಟಿಕೆಟ್ ದೊರಕುವುದಿಲ್ಲ ಎಂದು ಘೋಷಿಸಿದರು

ಅನೇಕ ಗಾಂಧೀವಾದಿಗಳು, ಸಮಾಜವಾದಿ ಮುಖಂಡರು ಈ ಹೋರಾಟಕ್ಕೆ ಬೆಂಬಲ ನೀಡಿದರು. ರಾಜ್ಯಪಾಲ ರಾದ ಕೃಷ್ಣಕಾಂತ ಕೂಡ ತಮ್ಮ ನೈತಿಕ ಬೆಂಬಲ ವ್ಯಕ್ತ ಪಡಿಸಿದರು. ಆದರೆ ಈ ಸಮಸ್ಯೆಗೆ ಸಂಬಂಧಿಸಿದಂತೆ ಸಮರ್ಪಕ ಹೇಳಿಕೆ ನೀಡುವಲ್ಲಿ ಕಾಂಗ್ರೆಸ್ ಸರಕಾರ ಸೋತಿತು.

ಸರಕಾರ ಮೊದಲಿನಿಂದಲೂ ಸಂಪೂರ್ಣ ಪಾನ ನಿಷೇಧದ ಬೇಡಿಕೆಯ ಬಗ್ಗೆ ತನ್ನ ಅಪನಂಬಿಕೆ ಯನ್ನು ಪ್ರದರ್ಶಿಸಿತ್ತು. ವಿಜಯಭಾಸ್ಕರರೆಡ್ಡಿ ತನ್ನ ವಾದಕ್ಕೆ ಹೊಸ ತಿರುವನ್ನು ನೀಡಿದ್ದರು : 'ಪಾನ ನಿಷೇಧ ಹಿಂದೊಮ್ಮೆ ಸೋತಿದೆ. ಅದು ಇನ್ನೊಮ್ಮೆ ಸೋಲುವುದು ನನಗೆ ಬೇಕಿಲ್ಲ.' ಈ ಚಳುವಳಿಯನ್ನು ಹತ್ತಿಕ್ಕುವ ಪ್ರಯತ್ನವನ್ನು ಆಡಳಿತ ಪಕ್ಷ ಮಾಡು ತ್ತಿರುವುದು ಈ ಹೇಳಿಕೆಯಿಂದ ಸ್ಪಷ್ಟವಾಗಿತ್ತು.

ಕೇವಲ ಸರಕಾರ ಮಾತ್ರವಲ್ಲ, ಸ್ವತಂತ್ರ ವೀಕ್ಷಕರೂ ಕೂಡ ಸಂಪೂರ್ಣ ಪಾನನಿಷೇಧದ ಬಗ್ಗೆ ತಮ ಅನುಮಾನ ವ್ಯಕ್ತಪಡಿಸಿದ್ದರು. ಅಧಿಕಾರಿಗಳ ನಿರ್ಲಿಪ್ತ ಧೋರಣೆಯೊಂದಿಗೇ ಪಾನನಿಷೇಧ ಸ್ವಲ್ಪ ಮಟ್ಟಿನ ಯಶಸ್ಸು ಕಂಡಿತ್ತು. 'ಆದರೆ ಇದು ಐಎಂಎಫ್ಎಲ್ ವಿಷಯದಲ್ಲಿ ಸಾಧ್ಯವಾಗುವುದಿಲ್ಲ ; ಕಾರಣ, ಇದನ್ನು ಬಳಸುವ ಮಧ್ಯಮ ಹಾಗೂ ಮೇಲ್ವರ್ಗದವರಿಗೆ ಸಂಪನ್ಮೂಲಗಳಿರುವುದರಿಂದ ತೊಂದರೆಗೊಳಗಾಗು ವುದಿಲ್ಲ ; ಅಲ್ಲದೆ ಅಧಿಕಾರಿಗಳ ಸಹಕಾರವೂ ಇವರಿಗಿರು ತ್ತದೆ, ಎಂಬ ವಾದವನ್ನು ಪಾನನಿಷೇಧದ ಚಳುವಳಿ ಕಾರರು ಒಪ್ಪಲಿಲ್ಲ. ಪಾಕ್ಷಿಕ ಪಾನನಿಷೇದವನ್ನು ಒಪ್ಪಿಕೊಂಡದ್ದೇ ತಪ್ಪು ಎನ್ನುವುದು ಅವರ ನಿಲು ವಾಗಿತ್ತು.

ಒಟ್ಟಾರೆ ನೋಡಿದಾಗ, ಮೊದಲು ನಡೆದ ಹೋರಾಟಕ್ಕೂ ಈಗಿನದಕ್ಕೂ ಹಲವು ವ್ಯತ್ಯಾಸಗಳಿದ್ದುವು. 1992ರಲ್ಲಿ ನೆಲ್ಲೂರಿನ ಗ್ರಾಮಾಂತರ ಪ್ರದೇಶಗಳಲ್ಲಿ ನಡೆದ ಚಳುವಳಿ ವಯಸ್ಕರ ಶಿಕ್ಷಣ ಕಾರ್ಯಕ್ರಮದ ಕೂಸಿನಂತೆ ತಾನೇ ತಾನಾಗಿ ಹುಟ್ಟಿಕೊಂಡಿತ್ತು. ಅದು ಗ್ರಾಮೀಣರ, ಗ್ರಾಮೀಣರಿಗಾಗಿ, ಗ್ರಾಮೀಣರಿಂದಾದ ಚಳುವಳಿ ಆಗಿತ್ತು. ಆದರೆ ನಂತರದ ಬೆಳವಣಿಗೆ ಐಎಂಎಫ್ಎಲ್‌ನ ವಿರುದ್ಧದ ಚಳುವಳಿಯಾಗಿ ರೂಪು ಗೊಂಡಿದ್ದು ಸ್ವಯಂ ಸ್ಫೂರ್ತಿಯನ್ನು ಕಳೆದುಕೊಂಡಿತ್ತು

ಕಾರಣ, ಮಧ್ಯಮ ಹಾಗೂ ಮೇಲ್ವರ್ಗದ ಮಂದಿ ಐಎಂಎಫ್‌ಎಲ್ ಅನ್ನು ಬಳಸುತ್ತಿದ್ದು. ಈ ವರ್ಗಗಳ ಮಹಿಳೆಯರು ಮಧ್ಯಪಾನದಿಂದಾಗುವ ಹಾನಿಯ ಬಗ್ಗೆ ಕಾಳಜಿ ತೋರ್ರಿದರೂ ಅಬ್ಬರದ ಪ್ರತಿಭಟನೆ ಮಾಡಲು ಅವರಿಂದಾಗಲಿಲ್ಲ.

ಇಂಥ ಸಣ್ಣಪುಟ್ಟ ವ್ಯತ್ಯಾಸಗಳೊಂದಿಗೆ ಪಾನನಿಷೇಧ ಚಳುವಳಿ ಅಂದಿನ ಹೋರಾಟದ ಮುಂದುವರಿಕೆಯಾಗಿ ಜನಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾಯಿತು. ಸರಕಾರದ ಬದಲಾವಣೆಯೊಂದಿಗೆ ತನ್ನ ಗುರಿ ಮುಟ್ಟಿದ ಈ ಚಳುವಳಿ ದೇಶಾದ್ಯಂತ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ರಾಜ್ಯಪಾಲ ಶ್ರೀ ಕೃಷ್ಣಕಾಂತರವರು, ಇದನ್ನೊಂದು ಇತಿಹಾಸದಲ್ಲಿ ಹಿಂದೆಂದೂ ಕಾಣದ 'ಒಂದು ನೈತಿಕ ಹಾಗೂ ಸಾಂಸ್ಕೃತಿಕ ಆಂದೋಲನ' ಎಂದು ಕರೆದದ್ದು ಅಕ್ಷರಶಃ ನಿಜ ಹಾಗೂ ಇತರ ರಾಜ್ಯಗಳಿಗೆ ಸ್ಫೂರ್ತಿದಾಯಕ.

○ ರಮೇಶ್ ಖುಂಡಲಾ

ಆಧಾರ: ರಾಷ್ಟ್ರೀಯ ಸಹಾರ, ನವೆಂಬರ್ 94

---

## ಅಸಹಾಯಕತೆ ... ?

ತಾಸೆರಡು ಪಿಶಾಚಿ ಮೌನದಲಿ
ಕಣ್ಣು ಪಿಳುಗುಡುತ್ತಿತ್ತು,
ತಲೆಯಲ್ಲಿ ನೂರಾರು ಸಾಧನೆ
ವರದಕ್ಷಿಣೆ ವೈಭವದ ಮದುವೆ ಏಕೆಂದು ?

ತಾತ ಕೆಮ್ಮಿದಾಗ ನೆನಪಿಸಿತು ಸಂಪ್ರದಾಯ ತೊಡರು
ಮನದಾಳದಾವುದೋ ಮೂಲೆಯಲ್ಲಿ,
ಮತ್ತಾದೇ ಸ್ಫೂರ್ತಿ ಮನಸಿದ್ದರೆ ಮಾರ್ಗ

ಕಂಕಣಕೂಡಿ ವೈಭವದಿಂದಲೇ ತಾಳಿ ಏರಿಸಿಯಾಯಿತು
ಕ್ಷಮಿಸಿ, ತಾಳಿ ಅಲ್ಲ ಕಮ್ಯುನಿಸ್ಟ್ ಲಗಾಮು
ತಿಳಿಯಿತೊಂದು ದಿನ ಅಪ್ಪಕೊಟ್ಟಿದ್ದ ವರದಕ್ಷಿಣೆ
ನನ್ನ ಕಣ್ಣು ಮುಚ್ಚಿ ಹಿಂದೆ

ಬಂಧನವ ನೂಕಿ ವಿಮೋಚನೆಗೆ ಧಾವಿಸಿಬಂದೆ,
ಅತ್ತೆಯ ಮುಖ ಗಂಟಿಕ್ಕಿ
ಮಾವನ ಕೋಪ ನೆತ್ತಿಗೇರಿತು. ಅಪ್ಪಾ ಕದ ತೆರೆಯಲಿಲ್ಲ

ಕೋಪ ಬಂದು ಉರಿವ ಒಲೆಯ ಕದಡಿದೆ
ನಂದಿಹೋಯಿತು, ಹತ್ತಿಸಲು ಹೋರಾಡಿ
ಮೈ ಕೈ ಮುಖಕ್ಕೆಲ್ಲ ಮಸಿ
ಮೂಲೆಯಲಿ ಮಗು ಬೆರಳು ತೋರಿಸಿ ನಗುತ್ತಿತ್ತು.

–ಸುರೇಖಾ ಕೆ.



# ಸಾರಾಯಿ ವಿರೋಧಿ ಚಳವಳಿ : ಇತಿಮಿತಿಗಳು

ಸಾರಾಯಿ ನಿಷೇಧಕ್ಕಾಗಿ ಆಂಧ್ರದ ನೆಲ್ಲೂರು ಜಿಲ್ಲೆಯಲ್ಲಿ ನಡೆದಂಥ ಹೋರಾಟ ಮೈಸೂರು ಜಿಲ್ಲೆಯಲ್ಲೂ ಪುನರಾವರ್ತನೆಗೊಳ್ಳಬಹುದೇನೋ ಎಂಬ ಆಸೆ ಮೂಡಿಸಿದ್ದು ಇಲ್ಲಿಯ ಹುಣಸೂರು ಮತ್ತು ಪಿರಿಯಾಪಟ್ಟಣ ತಾಲ್ಲೂಕಿನ ಎರಡು ಹಳ್ಳಿಗಳು. ಆದರೆ ಆ ಆಸೆ ಆಸೆಯಾಗಿಯೇ ಉಳಿಯಿತು. ಅದಕ್ಕೆ ಕಾರಣವಾದ ಅಂಶಗಳನ್ನು–ಸರಕಾರದ ಮಾನವ ವಿರೋಧೀ ನೀತಿ, ಪಿತೃಪ್ರಧಾನ ವ್ಯವಸ್ಥೆಗಳು ಅಂಥ ಚಳುವಳಿಗಳು ಆಳವಾಗಿ ಬೇರೂರುವ ಮೊದಲೇ ಮೊಳಕೆಯಲ್ಲೇ ಹೇಗೆ ಚಿವುಟಿಹಾಕಬಲ್ಲವೆಂಬುದರ ಚಿತ್ರಣವನ್ನು, ಸಾಕ್ಷರತಾ ಆಂದೋಲನಕ್ಕೆ ಧುಮುಕುವ ಮುನ್ನ ಹಲವು ಕನಸುಗಳನ್ನು ಹೊತ್ತು ತಮ್ಮನ್ನು ಕೆಲವು ಕಾಲ ಅದರಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಸರಸ್ವತಿಯವರು ನೀಡಿದ್ದಾರೆ.

ಮೈಸೂರು ಜಿಲ್ಲೆಯಲ್ಲಿ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ ಪ್ರಾರಂಭವಾದಾಗ ಆಂಧ್ರದ ಮಹಿಳೆಯರು ನೆಲ್ಲೂರಿನಲ್ಲಿ ನಡೆಸಿದ ದಿಗ್ವಿಜಯದ ಘಟನೆಗಳು ನನ್ನನ್ನು ರೋಮಾಂಚನಗೊಳಿಸುತ್ತಿದ್ದವು. ನೆಲ್ಲೂರಿನ ಆಂದೋಲನದ ಕಿಡಿ ಮೈಸೂರು ಜಿಲ್ಲೆಗೂ ವ್ಯಾಪಿಸಿದರೆ ಎನ್ನುವ ಕನಸಿನೊಂದಿಗೆ ನಾನು ಸಾಕ್ಷರತಾ ಆಂದೋಲನ ಕಾರ್ಯಕರ್ತೆಯಾದೆ.

ಮೈಸೂರು ಜಿಲ್ಲೆಯಲ್ಲಿ ಸಾಕ್ಷರತಾ ಆಂದೋಲನ ಪ್ರಾರಂಭವಾಗುವ ಮೊದಲು ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಈ ಕಾರ್ಯಕ್ರಮ ಜಾರಿಯಲ್ಲಿತ್ತು. ಮಂಡ್ಯ ಜಿಲ್ಲೆಯಲ್ಲಿ ಕೆಲವು ಗ್ರಾಮಗಳಲ್ಲಿ ಸಾರಾಯಿ ಮಾರಾಟ ನಿಂತಿದೆ ಎಂಬ ಪತ್ರಿಕಾ ವರದಿ ಬಿಟ್ಟರೆ ಸಾಕ್ಷರತಾ ಆಂದೋಲನಕ್ಕೂ ಸಾರಾಯಿವಿರೋಧಿ ಚಳುವಳಿಗೂ ಸಂಬಂಧವೇರ್ಪಟ್ಟಿರಲಿಲ್ಲ.

'ಮಹಿಳಾ ಸಾಕ್ಷರತೆಗಾಗಿ' ಕೆಲಸ ಮಾಡಲು ನಿಯೋಜಿತಳಾಗಿದ್ದ ನಾನು ಹಳ್ಳಿಗಳಲ್ಲಿ ಸಂಘ ಸಂಸ್ಥೆಗಳ ಮುಖಾಂತರ ಮಹಿಳೆಯರನ್ನು ಸಂಘಟಿಸುತ್ತ ಸಭೆಗಳನ್ನು ಏರ್ಪಡಿಸುತ್ತ ಸಾಕ್ಷರತೆಯ ಮಹತ್ವ, ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಮಹಿಳೆಯರ ಪಾತ್ರ, ಆರೋಗ್ಯ ರಕ್ಷಣೆ ಇತ್ಯಾದಿ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಿದ್ದೆ. ನನ್ನ ಮನದಾಳದಲ್ಲಿ ತೀವ್ರವಾಗಿ ತುಡಿಯುತ್ತಿದ್ದ ಸಾರಾಯಿ ವಿರೋಧದ ಮಹಿಳಾ ಜಾಗೃತಿ ಸುಲಭವಾಗಿರಲಿಲ್ಲ. ಕೇವಲ ಕೆಲವೇ ತಿಂಗಳುಗಳಲ್ಲಿ ಇಂಥದೊಂದು ವಾತಾವರಣ ಸೃಷ್ಟಿಸುವುದು ಸುಲಭವಾಗಿರಲಿಲ್ಲ. ಸಾಕ್ಷರತಾ ಆಂದೋಲನ ಸರ್ಕಾರಿ ಕಾರ್ಯಕ್ರಮವಾಗಿತ್ತು. ನಾನು ಸರ್ಕಾರಿ ನೌಕರಿಯಲ್ಲಿದ್ದವಳು. ಸರ್ಕಾರಿ ಕಾರ್ಯಕ್ರಮದ ವಕ್ತಾರಳು. ನಮ್ಮ ಬಹುತೇಕ ಕಾರ್ಯಕ್ರಮಗಳಲ್ಲಿ ಸರ್ಕಾರಿ ಅಧಿಕಾರಿಗಳೇ ತುಂಬಿರುತ್ತಿದ್ದರು. ಸಾರಾಯಿ ವ್ಯವಹಾರ ಕೂಡಾ ಸರಕಾರದ ಅನುಮತಿಯೊಂದಿಗೆ ನಡೆಯುತ್ತಿರುವ ವ್ಯವಹಾರವಾಗಿತ್ತು. ನನಗೆ ನನ್ನ ಮಿತಿಯ ಅರಿವಾಗತೊಡಗಿತ್ತು.

ಇಂಥ ಪರಿಸ್ಥಿತಿಯಲ್ಲಿ ಇದ್ದಕ್ಕಿದಂತೆ ಮೈಸೂರಿನಿಂದ 70 ಕಿ. ಮೀ. ದೂರದಲ್ಲಿರುವ ಪಿರಿಯಾಪಟ್ಟಣ ತಾಲ್ಲೂಕಿನ ಬೂದಿತಿಟ್ಟು ಗ್ರಾಮದಲ್ಲಿ ನವಸಾಕ್ಷರ

---

● ಹೆಚ್. ಜಿ. ಸರಸ್ವತಿ

---

ಮಹಿಳೆಯರು ಸಾರಾಯಿ ಅಂಗಡಿಯನ್ನು ಮುಚ್ಚಿಸಿರುವ ಸುದ್ದಿಯನ್ನು ಸಾಕ್ಷರತಾ ಕಾರ್ಯಕರ್ತರು ಉತ್ಸಾಹದಿಂದ ವಿವರಿಸುತ್ತಿದ್ದರು. ಕೆದಕಿ ಬೆದಕಿ ಪ್ರಶ್ನೆಗಳನ್ನು ಕೇಳಿದೆ. ನನ್ನ ಪ್ರಶ್ನೆಗಳಿಂದ ಕಾರ್ಯಕರ್ತರಿಗೆ ಸ್ವಲ್ಪ ಸಿಟ್ಟು ಬಂತು. ಮಹಿಳೆಯರು ಸಾರಾಯಿ ಅಂಗಡಿ ಮುಚ್ಚಿಸಿದ್ದೇ ಆಗಿದಿದ್ದರೆ ಅದು ನನಗೆ ಅತ್ಯಂತ ಸಂಭ್ರಮದ ಸುದ್ದಿಯಾಗಿತ್ತು. ಅದೂ ನವಸಾಕ್ಷರ ಮಹಿಳೆಯರಿಂದಲೋ ಅಥವಾ ಊರಿನ ಯಾವುದಾದರೂ ಹಳಸಲು ರಾಜಕೀಯವೋ ಎಂಬ ಅನುಮಾನ ನನ್ನನ್ನು ಕಾಡುತ್ತಿತ್ತು. ನವಸಾಕ್ಷರರು ಜಾಗೃತರಾಗಿದಿದ್ದರೆ, ಮಹಿಳೆಯರು ಮೈಕೊಡವಿಕೊಂಡು ಎದ್ದಿದ್ದರೆ ಅದು

ಮೈಸೂರು ಜಿಲ್ಲೆಗೆಲ್ಲಾ ಹಬ್ಬುತ್ತದೆ ಇಲ್ಲವಾದರೆ ಬೂದಿತಿಟ್ಟಿನಲ್ಲೇ ಮುಚ್ಚಿ ಹೋಗುತ್ತದೆ ಎಂದು ನಾನು ಹೇಳಿದಾಗ ಮಹಿಳೆಯರನ್ನು ಸಂಘಟಿಸಿ ಕಾಡಿನ ಹಾದಿಯಲ್ಲಿ ಮೂರು ರಾತ್ರಿ ನಿದ್ದೆಗೆಟ್ಟಿದ್ದ ತರುಣರಿಗೆ ನನ್ನ ಮೇಲೆ ಇನ್ನಿಲ್ಲದ ಸಿಟ್ಟು ಬಂದಿತ್ತು.

ಆಗಸ್ಟ್, ಸೆಪ್ಟೆಂಬರ್ 93 ರಲ್ಲಿ ಕಲಿಕಾ ಕೇಂದ್ರಗಳು ಮೈಸೂರು ಜಿಲ್ಲೆಯಲ್ಲಿ ಪ್ರಾರಂಭವಾಗಿದ್ದವು. ಅಂತೆ ಬೂದಿತಿಟ್ಟಿನಲ್ಲೂ ಅಕ್ಷರ ಕಲಿಕೆಗೆ ಕೆಲವು ಮಹಿಳೆಯರು ಆಸಕ್ತಿ ತೋರಿಸಿದ್ದರು. ಅವರೆಲ್ಲ ಬಹುಮಟ್ಟಿಗೆ ಬಡವರೇ. ಕೂಲಿ ಮಾಡಿ ಬದುಕುತ್ತಿದ್ದವರು. ಗಂಡಸರೆಲ್ಲ ತಮ್ಮ ದುಡಿಮೆಯನ್ನು ಸಂಪೂರ್ಣವಾಗಿ ಕುಡಿದು ಬರಿಗೈಲಿ ಮನೆ ಸೇರುತ್ತಿದ್ದರು. ಹೆಂಡತಿ ಮಕ್ಕಳನ್ನು ದನ ಬಡಿದಂತೆ ಹೊಡೆಯುತ್ತಿದ್ದರು. ರೋಸಿಹೋಗಿದ್ದ ಮಹಿಳೆಯರಿಗೆ ಸಾಕ್ಷರತಾಕಾರ್ಯಕರ್ತರು ಸಾರಾಯಿ ವಿರುದ್ಧ ಹೋರಾಡಿ ಎಂದಾಗ ಸಂತೋಷವೇ ಆಗಿತ್ತು. ಊರೊಳಗೆ ಸಾರಾಯಿ ಅಂಗಡಿ ಇಲ್ಲದಿದ್ದರೆ ತಮ್ಮ ಗಂಡಂದಿರು ಕುಡಿದ ಅಮಲಿನಲ್ಲಿ ಬಂದು ಹೊಡೆಯುವುದನ್ನಾದರೂ ತಪ್ಪಿಸಿಕೊಳ್ಳಬಹುದೆ ಎಂದು ಯೋಚಿಸಿದರು. ಅವರ ಈ ಯೋಚನೆಗೆ ಊರಿನ ಕೆಲವು ಪುರುಷರ ಬೆಂಬಲವೂ ದೊರಕಿತು. ಮಹಿಳೆಯರ ನೇತೃತ್ವದಲ್ಲಿ ಸಾರಾಯಿ ಹೊತ್ತು ತಂದ ವಾಹನವನ್ನು ತಡೆಹಿಡಿದು ಅಂಗಡಿಯನ್ನು ಮುಚ್ಚಿಸಲಾಯ್ತು. ಇದೇ ಘಟನೆ ಎರಡು ದಿನ ನಡೆದು ಸಾರಾಯಿ ಊರೊಳಗೆ ಬಾರದಂತೆ ತಡೆದು ಹಿಂದುರಿಗಿಸಿದ ಸಂಭ್ರಮದಲ್ಲಿ ಮಹಿಳೆಯರು 'ಕಲಿಕಾಕೇಂದ್ರ'ಗಳಲ್ಲಿ ಅಕ್ಷರಾಭ್ಯಾಸ ಮಾಡತೊಡಗಿದರು.

ಈ ಸಂತೋಷ ಬಹಳ ಕಾಲ ಉಳಿಯಲಿಲ್ಲ. ಹೆಂಡದ ದೊರೆಗಳು ಮಹಿಳೆಯರ ಧೈರ್ಯವನ್ನು ಕುಗ್ಗಿಸುವ ಕೆಲಸದಲ್ಲಿ ತೊಡಗಿದರು. ಮೊದಲನೆಯದಾಗಿ ಸಾರಾಯಿ ವಿರೋಧಿ ನೇತೃತ್ವ ವಹಿಸಿದ್ದ ಮಹಿಳೆಯ ಮಗನನ್ನು ಹಿಗ್ಗಾಮುಗ್ಗಾ ಥಳಿಸಿ ಅವನ ಕಿವಿ ಮೂಗಿನಿಂದ ರಕ್ತಸ್ರಾವವಾಗಿ ಪ್ರಜ್ಞಾಹೀನ ಸ್ಥಿತಿಗೆ ಬಂದಾಗ ಅಕಸ್ಮಾತ್ ಕಲಿಕಾ ಕೇಂದ್ರದ ಉಸ್ತುವಾರಿಗೆ ತೆರಳಿದ್ದ ಸಾಕ್ಷರತಾ ಕಾರ್ಯಕರ್ತರು ಬಾಲಕನನ್ನು ಪಿರಿಯಾಪಟ್ಟಣದ ಆಸ್ಪತ್ರೆಗೆ ಕರೆದೊಯ್ದು ಚಿಕಿತ್ಸೆ ಕೊಡಿಸದಿದ್ದರೆ ಆತ ಉಳಿಯುತ್ತಿರಲಿಲ್ಲ.

ಸಾರಾಯಿ ಅಂಗಡಿ ಮುಚ್ಚಿಸಿದ ಸಂತೋಷದಲ್ಲಿದ್ದ ಮಹಿಳೆಯರಿಗೆ ಒಂದೊಂದೇ ಸಮಸ್ಯೆ ಎದುರಾಗತೊಡಗಿದವು. ಮದ್ಯದ ಅಂಗಡಿ ಲೈಸನ್ಸ್ ಇದ್ದೇ ನಡೆಯುತ್ತಿದೆ ಅದನ್ನು ಮುಚ್ಚಿಸುವುದು ಸಾಧ್ಯವಿಲ್ಲ ತೆಗೆದೇ ತೆಗೆಯುತ್ತೇವೆ ಎಂಬ ಸುದ್ದಿಯನ್ನು ಮದ್ಯ ಮಾರಾಟಗಾರರ ಕಡೆಯಿಂದ ಹರಡಿಸಲಾಯ್ತು. ಜತೆಗೆ ಹೆಂಗಸರನ್ನೇ ಉಪಯೋಗಿಸಿಕೊಂಡು ಮನೆಯಲ್ಲೇ ಮದ್ಯ ಮಾರಾಟ ವ್ಯವಸ್ಥೆ ಮಾಡಲಾಯ್ತು. ಅಧಿಕೃತ ಅಂಗಡಿ ಹೊರನೋಟಕ್ಕೆ ಮುಚ್ಚಲಾಗಿತ್ತು ಆದರೆ ಬೂದಿತಿಟ್ಟಿನ ಗಂಡಸರಿಗೆ ಬೇಕಾದಷ್ಟು ಮದ್ಯ ಬೂದಿತಿಟ್ಟಿನ ಮನೆಗಳಲ್ಲೇ ಸಿಗುವಂತಾಗಿತ್ತು.

ಮಹಿಳೆಯರು ಹತಾಶರಾಗಿದ್ದರು. ಅವರೆಲ್ಲ ಬೂದಿತಿಟ್ಟಿನಿಂದ ಮೆರವಣಿಗೆಯಲ್ಲಿ ಬಂದು ಪಿರಿಯಾಪಟ್ಟಣದ ತಾಲ್ಲೂಕು ಕಛೇರಿಯ ಎದುರು ಧರಣಿ ನಡೆಸಿದರು. ಶಾಲಾಮಕ್ಕಳು ಸೇರಿದಂತೆ ಸುಮಾರು 150 ಮಂದಿ ಧರಣಿಯಲ್ಲಿ ಪಾಲ್ಗೊಂಡಿದ್ದರು. ಆ ಮಹಿಳೆಯರೊಂದಿಗೆ ಮಾತನಾಡಲು ನಾನು ಅಲ್ಲಿಗೆ ಹೋಗಿದ್ದೆ. ಮಹಿಳೆಯರೆಲ್ಲ ಸಿಟ್ಟಿನಿಂದ ಕುದಿಯುತ್ತಿದ್ದರು. ನಾಲ್ಕೈದು ಮಂದಿಯಂತೂ ಆವೇಶ ಬಂದವರಂತೆ ಒಂದೇ ಸಮನೆ ಘೋಷಣೆಗಳನ್ನು ಕೂಗುತ್ತಿದ್ದರು. ಸರ್ಕಾರದ ವಿರುದ್ಧ, ಎಂಎಲ್‌ಎ ವಿರುದ್ಧ, ಸಾರಾಯಿ ವಿರುದ್ಧ ತಮ್ಮೆಲ್ಲ ನೋವಿಗೆ ದನಿ ನೀಡುವಂತೆ ಕೂಗುತ್ತಿದ್ದರು. ತಹಸೀಲ್ದಾರ್ ಬಂದರು, ಮನವಿಯನ್ನು ಸ್ವೀಕರಿಸಿದರು. ಜಿಲ್ಲಾಧಿಕಾರಿಗಳಿಗೆ ಕಳುಹಿಸುವುದಾಗಿ ತಿಳಿಸಿದರೂ ಮಹಿಳೆಯರು ಒಪ್ಪಲಿಲ್ಲ. ತಾವೇ ಜಿಲ್ಲಾಧಿಕಾರಿಗಳೊಂದಿಗೆ ಮಾತನಾಡುವುದಾಗಿ ಪಟ್ಟು ಹಿಡಿದು ಕುಳಿತರು. ಕೊನೆಗೆ ಜಿಲ್ಲಾಧಿಕಾರಿಗಳೊಂದಿಗೆ ದೂರವಾಣಿಯಲ್ಲಿ ಮಾತನಾಡಿದರು.

ನಾನು ಮಹಿಳೆಯರೊಂದಿಗೆ ಒಂದಷ್ಟು ಮಾತನಾಡುವ ಉದ್ದೇಶದಿಂದ ಅವರ ನಡುವೆ ಹೋದೆ. ಅಲ್ಲಿ ಸೇರಿದ್ದ ಮಹಿಳೆಯರು ಒಬ್ಬರ ನಂತರ ಮತ್ತೊಬ್ಬರು ನನ್ನ ಮುಖಕ್ಕೆ ಪ್ರಶ್ನೆಗಳ ಬಾಣವನ್ನು ಎಸೆದ ಅನುಭವ ನನಗಾಯ್ತು. ಒಂದು ಪ್ರಶ್ನೆಗೂ ಪರಿಹಾರ ಸೂಚಿಸುವ ಸ್ಥಿತಿಯಲ್ಲಿ ನಾನಿರಲಿಲ್ಲ. ಮಹಿಳಾ ಜಾಗೃತಿಗಾಗಿ ಕೆಲಸ ಮಾಡಲು ಹೋಗಿದ್ದವಳು ನಾನು, ಅವರ ಪ್ರಶ್ನೆಗಳಿಂದ ತತ್ತರಿಸಿದ್ದೆ. "ನೀವೆಲ್ಲ ಬಂದು ಅಕ್ಷರ ಕಲೀರಿ ಅಂತ

ಹೇಳ್ತೀರಲ್ಲ, ದಿನವೆಲ್ಲ ಕೂಲಿಮಾಡಿ ಬರ್ತೀವಿ ಸಂಜೆ ಹೊತ್ತಿಗೆ ಕುಡ್ಡು ಬಂದು ಚಚ್ತಾರಲ್ಲ, ನಾವು ದುಡಿದ್ದದ್ನ ಕಿತ್ತಕಂಡ ಹೋಗ್ತಾರಲ್ಲ, ಏನು ಅಕ್ಷರ ಕಲಿಯ್ತಾನ ಹೇಳಿ" ಅಂತ ಒಬ್ಬ ಮಹಿಳೆ ಪ್ರಶ್ನಿಸಿದರೆ ಮತ್ತೊಬ್ಬಳು "ನಮ್ಮ ಮಕ್ಕಳಿಗೆ ಹೊಟ್ಟೆಗೆ ಹಿಟ್ಟಿಲ್ಲ, ಮೈಗೆ ಬಟ್ಟೆಲ್ಲ, ಕುಡುಕ ಅಪ್ಪಂದೀರ ಹೊಡೆತ ತಿಂದಿರ್ತಾರೆ, ನಿಮ್ಮ ಮಕ್ಕಳ ಸಮಾಕ್ಕೆ ಕೂತ್ಗಂಡು ನಮ್ಮ ಮಕ್ಕಳು ಓದ್ತಾವಾ ಹೇಳಿ?"

"ಒಳ್ಳೆ ನೀರು ಕುಡೀರಿ ಅಂತಾ ಹೇಳ್ತೀರಾ, ಕೂಲಿ-ಕಂಬ್ಳ ಮಾಡ್ಕಂಡು ಅರ್ಧಮೈಲಿ ಹೋಗ್ಬೇಕು ನೀರ್ ಹೆಂಡದಂಗಡಿ ದೂರ ಇಡ್ಸಿ. ಮನೀಗೆ ಬರೊ ಹೊತ್ಗೆ ಕುಡ್ದ ಅಮಲಾದ್ರೂ ಇಳಿದಿರ್ಲಿ. ಹೊಡ್ತನಾದ್ರು ತಪ್ಪಿದ್ರೆ ಸಾಕು. ಹೆಂಗೂ ಸರಕಾರನೇ ಲೈಸನ್ಸ್ ಕೊಟ್ಟು ಸಾರಾಯಿ ಮಾರಿಸ್ತಾ ಇದೆಯಲ್ಲ"—ನೊಂದ ಮಹಿಳೆಯರ ಈ ಮಾತುಗಳನ್ನು ನಾನು ಕೇಳುತ್ತ ಹೋದೆ. ಅವರಿಗೆ ಯಾವ ಸಾಂತ್ವನದ ಮಾತನ್ನು ಹೇಳಲಿ ? ಯಾವ ಭರವಸೆಯ ಮಾತನ್ನು ಆಡಲಿ ?

ಆ ಮಹಿಳೆಯರನ್ನು ಮಕ್ಕಳನ್ನು ಧರಣಿಗೆ ಸಂಘಟಿಸಿ ಕರೆತಂದಿದ್ದ ಗ್ರಾಮಪಂಚಾಯತಿಯ ಮಾಜಿ ಅಧ್ಯಕ್ಷ

> ಹಿಮಾಚಲ ಪ್ರದೇಶದ ನಾಲಾಘರ್‌ನಿಂದ 15ಕಿ.ಮೀ ದೂರದಲ್ಲಿರುವ ಬರೋಟಿವಾಲದಲ್ಲಿ ನಡೆದ ಸಾರಾಯಿ ವಿರೋಧೀ ಪ್ರತಿಭಟನೆ ವಿಶೇಷ ರೀತಿಯದಾಗಿತ್ತು. ಸಾರಾಯಿ ಅಂಗಡಿಗಳ ಚಟುವಟಿಕೆಗಳು ಹೆಚ್ಚುವ ಸಮಯದಲ್ಲಿ 50ಕ್ಕಿಂತ ಹೆಚ್ಚು ಮಹಿಳೆಯರು ಘೋಷಣಾ ಫಲಕಗಳನ್ನು ಹಿಡಿದು ಮೌನವಾಗಿ ನಿಲ್ಲುತ್ತಿದ್ದರು. ಸಂದೇಶ ಸ್ಪಷ್ಟವಾಗಿರುತ್ತಿತ್ತು; ಅಂಗಡಿಗಳು ಮುಚ್ಚುತ್ತಿದ್ದವು. ಆದರೆ ಪ್ರತಿಭಟನೆ ಅಲ್ಲಿಗೇ ಮುಗಿಯುತ್ತಿರಲಿಲ್ಲ. ಚಳಿಯ ಇಡೀ ರಾತ್ರಿ ಧರಣಿ ಮುಂದುವರೆಯುತ್ತಿತ್ತು. ಇಲ್ಲಿ ಎಲ್ಲಾ ವಯಸ್ಸಿನ ಮಹಿಳೆಯರು ತಮ್ಮ ತಮ್ಮ ಚಿಕ್ಕ ಮಕ್ಕಳೊಂದಿಗೆ ಧರಣಿಯಲ್ಲಿ ಭಾಗವಹಿಸುತ್ತಿದ್ದರು. ತಮಗೆ ಅಪಾಯ ಸೂಚನೆ ದೊರೆತಾಗ ಬೇರೆಡೆ ಇರುವ ಸೋದರಿಯರಿಗೆ ತಿಳಿಯಲೆಂದು ನಗಾರಿ ಬಡಿಯುವುದು, ಹಾಡುಗಳನ್ನು ಹಾಡುವುದು ಮುಂತಾದ ವಿಧಾನಗಳನ್ನು ಬಳಸುತ್ತಿದ್ದರು. ಸಾರಾಯಿ ಮಾರಾಟಗಾರರಿಗೆ ಹಾಗೂ ಕುಡಿಯುವವರಿಗೆ ನಾಚಿಕೆ ಆಗುವಂಥ ತಂತ್ರಗಳನ್ನು, ಅಂದರೆ ಅವರ ಮುಖಗಳಿಗೆ ಕಪ್ಪು ಬಣ್ಣ ಬಳಿಯುವುದು ಅಥವಾ ಹಳ್ಳಿಯ ಬೀದಿಗಳಲ್ಲಿ ಮೆರವಣಿಗೆ ಮಾಡುವುದು ಮುಂತಾದ ವಿಧಾನಗಳನ್ನು ಬಳಸುತ್ತಿದ್ದರು.
>
> ಇಂಥ ಪ್ರತಿಭಟನೆ ಬರೋಟಿವಾಲಕ್ಕೆ ಮಾತ್ರ ಸೀಮಿತವಾಗಲಿಲ್ಲ. ಇಲ್ಲಿಂದ 40 ಕಿ.ಮೀ. ದೂರದ ಜಬ್ಲಿಗೂ ಹರಡಿತು. ಇವರ್‍ಯಾರೂ ಘೋಷಣೆಗಳನ್ನು ಕೂಗಲಿಲ್ಲ. ಮೆರವಣಿಗೆಗಳನ್ನು ನಡೆಸಲಿಲ್ಲ. ಅವರಿಗೆ ಬೇಕಾದದ್ದು ಹಳ್ಳಿಗಳಲ್ಲಿ ಸಾರಾಯಿ ಮಾರಾಟದ ನಿಲುಗಡೆ. ಇವರಲ್ಲಿ ಕೆಲವರಿಗೆ ಪ್ರತಿಭಟನೆಯಲ್ಲಿ ಭಾಗವಹಿಸಲು ಕುಟುಂಬದ ಗಂಡಸರ ಬೆಂಬಲವೂ ದೊರಕಿತ್ತು. ಇವರಿಗೆ SUTRA "ಸೋಷಿಯಲ್ ಅಪ್‌ಲಿಫ್ಟ್ ಥ್ರೂ ರೂರಲ್ ಆ್ಯಕ್ಷನ್" ಎಂಬ ಸ್ವಯಂ ಸೇವಾಸಂಸ್ಥೆಯ ಸಹಕಾರವೂ ಇತ್ತು.

ತರಾಕೆ. ಎಲ್ಲಿದ್ದತು ತ್ರಾಣ. ಹೊತ್ತಿಗೆ ಸರಿಯಾಗಿ ಮಾಡಿ ಇಕ್ಕದಿದ್ರೆ ಕೈಗೆ ಸಿಕ್ಕಿದ್ರಲ್ಲೆ ಚಚ್ತಾರೆ ಕುಡ್ದ ಗ್ಯಾನದಲ್ಲಿ ಏನ ಮಾಡಾನಾ ಹೇಳಿ ?"

"ಮಕ್ಕಳನ್ನಾದರೂ ಸಾಕ್ತಾರಾ ? ಓಹೋ ಹೆತ್ತಿರೋರು 'ನೀವಲ್ವ ಸಾಕಿ ಅಂತಾರೆ. ದಿನಾ ಕೂಲಿ ಮಾಡಿದ್ದ ಕುಡಿತಾರೆ, ನಮ್ಮ ಕೂಲೀನೂ ಕಿತ್ತುಕೊತ್ತಾರೆ. ಹೋಗ್ಲಿ ನಮ್ಮ ಗಂಡಸರು ಕುಡಿಯಾದ ಬಿಡಿಸಾಕಾಗಲ್ಲ 60 ಮನೆಯ ಆ ಪುಟ್ಟ ಗ್ರಾಮ ವರುಷಕ್ಕೆ ಸರಾಸರಿ 4 ಲಕ್ಷ ರೂಪಾಯಿಯನ್ನು ಕುಡಿತಕ್ಕೆ ಖರ್ಚುಮಾಡುತ್ತಿರುವ ಸಂಗತಿ ಹೇಳಿದಾಗ ನಾನು ಮತ್ತೂ ದಂಗಾದೆ. ಬಹುಶಃ ಆ ಗ್ರಾಮದ ಎಲ್ಲ ನಿವಾಸಿಗಳ ಊಟೋಪಚಾರ ಬಟ್ಟೆಬರೆಗಳ ಖರ್ಚು ಒಂದು ಲಕ್ಷ ದಾಟಲಾರದೇನೋ ಎನಿಸಿತು. ಹೆಂಗಸರಂತೂ ತಮ್ಮ ಎಲ್ಲಾ ಸಿಟ್ಟನ್ನು ಕಾರಿಕೊಳ್ಳಲು ಇದೇ ಸುಸಂದರ್ಭವೆಂದು ತಿಳಿದಿದ್ದರೋ

ಅಥವಾ ತಮ್ಮ ಈ ಅಭಿವ್ಯಕ್ತಿಯಿಂದ ಸರಕಾರದ ಕಣ್ಣು ತೆರೆಸಬಹುದೆಂದಿದ್ದರೋ.

ಇನ್ನೆರಡೇ ದಿನಗಳಲ್ಲಿ ಈ ಘಟನೆ ಮತ್ತೊಂದು ವಿಚಿತ್ರ ಅನಿರೀಕ್ಷಿತ ತಿರುವನ್ನು ಪಡೆದುಕೊಂಡುಬಿಟ್ಟಿತ್ತು. ತಹಸೀಲ್ದಾರ್ ಕಛೇರಿಯ ಎದುರಿಗೆ ಧರಣಿಗೆ ತೆರಳಿದ್ದ ಮಹಿಳಾ ಮುಖ್ಯಸ್ಥರ ಗಂಡಂದಿರನ್ನೆಲ್ಲಾ ಮದ್ಯದ 'ದೊರೆಗಳು' ಚೆನ್ನಾಗಿ ಬಳಸಿಕೊಂಡರು. ಅವರಿಗೆ ಕಂಠ ಪೂರ್ತಿ ಬಿಟ್ಟಿಯಾಗಿ ಕುಡಿಸಿ ಅವರ 'ಯಜಮಾನಿಕೆ' ಯನ್ನು ನೆನಪಿಗೆ ತಂದರು. ನಿಮ್ಮ ಹೆಂಡತಿಯರು ಮೆರವಣಿಗೆಗೆ ಹೋದದ್ದೇನು ? ಬಾಯಿಗೆ ಬಂದಂತೆ ಕೂಗಾಡಿದ್ದಾರಲ್ಲ ಮರ್ಯಾದೆಯಾ ? ಹೆಂಗಸರ ಬಾಯಿಗೆ ಲಂಗು ಲಗಾಮು ಬೇಡವೆ ? ಇದು ನಿಮಗೆ ಗೌರವ ತರೋದೆ ? ತಹಸೀಲ್ದಾರ್, ಎಂ.ಎಲ್.ಎ. ಎದುರಿಗೆ

ಗಳೂ ಹೆಚ್ಚಾಗಿಯೇ ಬಿದ್ದವು. ಸಾರಾಯಿ ವಿರುದ್ಧ ಹೋಗದೆ ಇದ್ದ ಹೆಂಗಸರನ್ನು ಇವರ ವಿರುದ್ಧ ಎತ್ತಿಕಟ್ಟಿ ಸಾರಾಯಿ ಅಂಗಡಿ ಮುಚ್ಚಿಸಿದ್ದೆ ತಪ್ಪು ಎನ್ನುವಂಥ ವಾತಾವರಣ ನಿರ್ಮಿಸತೊಡಗಿದರು. ಕಲಿಕಾ ಕೇಂದ್ರ ನಡೆಸುವ ಮಹಿಳೆಯನ್ನು ಮಾನಭಂಗ ಮಾಡುವುದಾಗಿ ಬೆದರಿಸಲಾಯ್ತು.

ಈ ಎಲ್ಲ ಗೊಂದಲ-ಗೋಜಲುಗಳ ವಿವರಗಳನ್ನು ತಿಳಿಯಲು ಪ್ರೊಬೇಷನರಿ ಜಿಲ್ಲಾಧಿಕಾರಿಯಾಗಿದ್ದ ಕುಮಾರಿ ಉಮಾಮಹಾದೇವನ್ ಅವರೊಂದಿಗೆ ಸಾಕ್ಷರತಾ ಆಂದೋಲನದ ಕಾರ್ಯಕರ್ತರು ಬೂದಿತಿಟ್ಟಿಗೆ ಹೋದೆವು. ನಾವು ಬೂದಿತಿಟ್ಟನ್ನು ತಲುಪಿದಾಗ ರಾತ್ರಿ ಹತ್ತಾಗಿತ್ತು. ಉಮಾಮಹಾದೇವನ್ ಬಂದದ್ದರಿಂದ ಮಲಗಿದ್ದ ಊರ ಜನರೆಲ್ಲ ದಡಬಡನೆ ಎದ್ದುಬಂದರು.

ಸ್ವಾತಂತ್ರ್ಯಪೂರ್ವದಲ್ಲಿ ಮದ್ಯದಂಗಡಿಗಳನ್ನು ಮುಚ್ಚಿಸುವುದು ಅವುಗಳಿಗಿರುವ ಪರವಾನಗಿಗಳನ್ನು ರದ್ದುಪಡಿಸುವುದು ಅಲ್ಲಲ್ಲಿ ನಗರಗಳಲ್ಲಿ, ಊರುಗಳಲ್ಲಿ, ಹಳ್ಳಿಗಳಲ್ಲಿ ನಡೆದಿತ್ತು. ವಿನೋಬಾಭಾವೆಯವರ ನೇತೃತ್ವದಲ್ಲಿ ಸರ್ವೋದಯ ಚಳುವಳಿ ಬಿರುಸಾಗಿ ನಡೆಯುತ್ತಿದ್ದ ಸಂದರ್ಭದಲ್ಲಿ ಉತ್ತರ ಖಂಡದ ಗುಡ್ಡಗಾಡು ಪ್ರದೇಶಗಳಲ್ಲಿ ಕುಡಿತ ಹಾಗೂ ಅರಣ್ಯನಾಶದ ವಿರುದ್ಧ ಜನರನ್ನು ಸಂಘಟಿಸಲಾಯಿತು. ಈ ಪ್ರಯತ್ನಕ್ಕೆ ಮೀರಾಬೆನ್ ಮತ್ತು ಸರಳಾಬೆನ್‌ರವರು ಸ್ವಾತಂತ್ರ್ಯಾನಂತರದಲ್ಲಿ ಸ್ಥಾಪಿಸಿದ್ದ ಗಾಂಧೀ ಆಶ್ರಮಗಳೇ ಕೇಂದ್ರಸ್ಥಾನಗಳಾಗಿದ್ದವು. 1960ರ ದಶಕದಲ್ಲಿ ಇದು ಸಾರ್ಾಯಿ ವಿರೋಧೀ ಮಹಿಳಾ ಚಳುವಳಿಯಾಗಿ ಮಾರ್ಪಟ್ಟಿತು. ಈ ಚಳುವಳಿ ಸಾರಾಯಿ ತಯಾರಕರ ಹಾಗೂ ಮಾರಾಟಗಾರರ ವಿರುದ್ಧವಾಗಿದ್ದವು. ಇದರ ನೇತೃತ್ವವನ್ನು ಸುಂದರಲಾಲ್ ಬಹುಗುಣರವರೇ ವಹಿಸಿದ್ದರು. ಪರಿಣಾಮ ವೆಂದರೆ, ಕುಡಿತ ಮತ್ತು ಸಾರಾಯಿ ಮಾರಾಟಗಳ ಬಗ್ಗೆ ಸಾಮಾಜಿಕ ವಿರೋಧ ಉಂಟಾಯಿತು. ಆದರೆ ಸಾರಾಯಿಯನ್ನಾಗಲೀ ಅಥವಾ ಕುಡಿತವನ್ನಾಗಲೀ ಆ ಪ್ರದೇಶದಲ್ಲಿ ನಿಲ್ಲಿಸಲಾಗಲಿಲ್ಲ.

ನಿಂತು ಈ ಕೂಲಿನಾಲಿ ಮಾಡೋ ಹೆಂಗಸರು ವಾದ ಮಾಡೋದೇನು ? ನೀವು ಹೆಂಗಸರನ್ನು ಬಿಗಿಯಾಗಿ ಇಟ್ಟುಕೊಂಡಿದ್ದರೆ ಹೀಗಾಗುತ್ತಿತ್ತೇ ? ಇತ್ಯಾದಿ ಮಾತು ಗಳಿಂದ ಉತ್ತೇಜಿಸಿಬಿಟ್ಟರು.

ಒಂದುದಿನವೂ ಹೆಂಡತಿ ಮಕ್ಕಳ ಹೊಟ್ಟೆ ಬಟ್ಟೆ ಕಷ್ಟ ಸುಖದ ಬಗೆಗೆ ತಲೆಕೆಡಿಸಿಕೊಳ್ಳದೆ ದುಡಿದು-ಕುಡಿದು ಜೀವಿಸುತ್ತಿದ್ದ ಇವರಿಗೆಲ್ಲಾ ಅವರಲಿಸ್ಲೂ ಸ್ವಾಭಿಮಾನ ಜಾಗೃತವಾಗಿ ಅವಾಚ್ಯ ಶಬ್ದಗಳಿಂದ ಬಯ್ಯುತ್ತ ತಮ್ಮ ಹೆಂಡತಿಯರನ್ನು ತಾರಾಮಾರಾ ಚಚ್ಚಿದರು. ಮಾಮೂಲಿಗಿಂತ ಹೆಚ್ಚಾಗಿಯೇ ಕುಡಿದಿದ್ದರಿಂದ ಏಟು

ನಮ್ಮನ್ನು ಒಂದು ಮನೆಗೆ ಕರೆದುಕೊಂಡು ಹೋದರು. ಮನೆಯ ಬಾಗಿಲು ತೆರೆದೇ ಇತ್ತು. ಮನೆಯೊಳಗೆ ಕಾಲಿಡುವಾಗ ತುಂಬಾ ಎಚ್ಚರಿಕೆ ವಹಿಸಬೇಕಾಗಿತ್ತು. ಇಡೀ ಕೊಠಡಿ ಗಾಜಿನ ಚೂರುಗಳಿಂದ ಆವೃತ್ತವಾಗಿತ್ತು. ಸುಮಾರು ಹತ್ತು ಅಡಿ ಚದುರದ ಸಣ್ಣ ಕೊಠಡಿ ಮಧ್ಯ ದಲ್ಲಿ ಅಡ್ಡಗೋಡೆ ಹಾಕಿ ಅಡುಗೆಗೆ ಭಾಗ ಮಾಡ ಲಾಗಿತ್ತು. ಹರಕಲು ಚಾಪೆಯ ಮೇಲೆ ಮೂಳೆ ಚಕ್ಕಳ ವಾಗಿದ್ದ ಒಬ್ಬ ವ್ಯಕ್ತಿ ತಲೆತಗ್ಗಿಸಿ ಕುಳಿತಿದ್ದ. ಆತನಿಗೆ ಚೆನ್ನಾಗಿ ಕುಡಿಸಿದ್ದರಿಂದ ಅವನು ತನ್ನ ಹೆಂಡತಿಯನ್ನು ಹೊಡೆದಿದ್ದ. ನಂತರ ಮನೆಯಲ್ಲಿದ್ದ ಎಲ್ಲ ವಸ್ತುಗಳನ್ನು ಚೆಲ್ಲಾಪಿಲ್ಲಿಯಾಗಿ ಎಸೆದಿದ್ದ. ಗೋಡೆಯ ಮೇಲಿದ್ದ

ಎಲ್ಲಾ ಫೋಟೋಗಳನ್ನು ಒಡೆದು ಹಾಕಿದ್ದ. ಕನ್ನಡಿಯೂ ಛಿದ್ರವಾಗಿತ್ತು. ಆ ಪುಟ್ಟ ಮನೆಯ ಇದ್ದ ಒಂದೇ ಕೊಠಡಿಯ ಗೋಡೆಯಲ್ಲಿ ಸಾಲುಸಾಲಾಗಿ ದೇವರ ಪಠಗಳು ತೂಗುಹಾಕಲಾಗಿತ್ತು. ಎಲ್ಲ ಪಠಗಳ ಗಾಜೂ ಚೂರಾಗಿ ಚೌಕಟ್ಟು ಮಾತ್ರ ಉಳಿದಿದ್ದವು. ದೇವರ ಪಟದ ಕೆಳಗೆ ನರಪೇತಲನ ತಾರುಣ್ಯದ ದಾಂಪತ್ಯ ನಗು ಮೊಗದ ಫೋಟೋ ಕೂಡಾ ಗಾಜನ್ನು ಕಳೆದುಕೊಂಡಿತು. ಅಡುಗೆ ಮನೆಯಲ್ಲಿದ್ದ ಬಡತನದ ಎಲ್ಲ ಅಲ್ಯೂಮಿನಿಯಂ ಪಾತ್ರೆಗಳೂ ಕುಡುಕನ ಕೈಯ್ಯಲ್ಲಿ ಜಜ್ಜಿ ನುಗ್ಗೆಕಾಯಿ ಕುಡಿತದಿಂದ ರೋಸಿಹೋಗಿದ್ದ ಹಿರಿಯ ಮಗ 14 ವಸಂತಗಳನ್ನು ಕಾಣುತ್ತಿದ್ದಂತೆ ಉದ್ಯೋಗವನ್ನರಸಿಕೊಂಡು ಬೆಂಗಳೂರನ್ನು ಸೇರಿದ್ದ.

ನಾವು ಹೇಗೋ ಜಾಗ ಮಾಡಿಕೊಂಡು ಗಾಜಿನ ಚೂರುಗಳನ್ನು ಎತ್ತಿಹಾಕಿ ಸುಮಾರು ಒಂದು ಗಂಟೆಕಾಲ ಅಲ್ಲೇ ಕುಳಿತು ಮಾತನಾಡಿದೆವು. ಆ ನರಪೇತಲ ವ್ಯಕ್ತಿ ಬಾಯಿ ಬಿಡಲೇ ಇಲ್ಲ ಕೊನೆಗೊಮ್ಮೆ 'ಸಾಯಬೇಕು' ಎಂದಷ್ಟೇ ಹೇಳಿ ಸುಮ್ಮನಾದ.

ಅವನ ಹೆಂಡತಿ ಒಂದೇ ಸಮನೆ ಹಾರಾಡುತ್ತಲೇ

---

ಮಹಾರಾಷ್ಟ್ರದ ಧುಲಿಯಾದಲ್ಲಿ 1970ರ ದಶಕದಲ್ಲಿ ನಡೆದ ಶಹದಾ ಚಳುವಳಿ ಭೂರಹಿತ ಕಾರ್ಮಿಕ ಚಳುವಳಿಯಾಗಿತ್ತು. ಇದರಲ್ಲಿ ಭಿಲ್ಲ ಮಹಿಳೆಯರು ಅತ್ಯಂತ ಮುಖ್ಯ ಪಾತ್ರವಹಿಸಿದರು. ಇದೇ ಸಂದರ್ಭದಲ್ಲಿ ತಮ್ಮ ಗಂಡಂದಿರು ಕುಡಿದುಬಂದು ತಮಗೆ ಹೊಡೆಯುವುದನ್ನು ಪ್ರಶ್ನಿಸತೊಡಗಿದರು. ಇದೇ ಅವರ ಸಾರಾಯಿ ವಿರೋಧೀ ಚಳುವಳಿಗೆ ನಾಂದಿಯಾಯಿತು. ಭಿಲ್ಲ ಮಹಿಳೆಯರು ಸಾರಾಯಿ ಶೇಖರಿಸಿದ್ದ ಸ್ಥಳಗಳಿಗೆ ಗುಂಪುಗಳಲ್ಲಿ ಹೋಗಿ ಸಾರಾಯಿ ತುಂಬಿದ್ದ ಮಡಕೆಗಳನ್ನು ಒಡೆದರು ; ಈ ಚಳುವಳಿ ಎಲ್ಲಿಯವರೆಗೆ ವ್ಯಾಪಿಸಿತೆಂದರೆ 1972 ರಿಂದ 73ರ ವರೆಗೆ ಮಹಿಳೆಯರು ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗಿ ಸಾರಾಯಿ ಮಡಕೆಗಳನ್ನು ಒಡೆದರು. ಮಾರ್ಚಿ ತಿಂಗಳಲ್ಲಿ ನಡೆದ ಶ್ರಮಿಕ ಸಂಘಟನೆಯ ಶಿಬಿರವೊಂದರಲ್ಲಿ ಕರಮ್‌ಖೇಡದ ಮಹಿಳೆಯರು ತಮ್ಮ ಗಂಡಂದಿರು ಕುಡಿದು ಬಂದು ಹೊಡೆಯುತ್ತಿದ್ದುದನ್ನು ವಿವರಿಸಿ ತಮಗೆ ನೆರವಾಗುವಂತೆ ಶಿಬಿರಾರ್ಥಿಗಳನ್ನು ಕೋರಿದರು. ಆ ಕೂಡಲೇ ಮಹಿಳೆಯರೆಲ್ಲಾ ಆ ಹಳ್ಳಿಗೆ ಹೊರಟರು. ಮಾರ್ಗಮಧ್ಯೆ ಇತರೆ ಹಳ್ಳಿಯ ಮಹಿಳೆಯರೂ ಇವರ ಜೊತೆಗೂಡಿದರು. ಕರಮ್ ಖೇಡವನ್ನು ತಲುಪುತ್ತಲೇ ಸಾರಾಯಿ ಶೇಖರಣಾ ಸ್ಥಳಗಳಲ್ಲಿದ್ದ ಎಲ್ಲಾ ಮಡಕೆಗಳನ್ನೂ ಒಡೆದುಹಾಕಿದರು. ಅಲ್ಲಿಂದ ಸಬ್‌ಇನ್‌ಸ್ಪೆಕ್ಟರರಿಗೆ ಮುತ್ತಿಗೆ ಹಾಕಿದರು. ಮೋಡ್ ಎಂಬ ಹಳ್ಳಿಯಲ್ಲಿ ಸಾರಾಯಿ ಮಡಕೆಗಳನ್ನು ಒಡೆಯಲು ವಾದ್ಯಮೇಳಗಳೊಂದಿಗೆ ನಡೆದರು ; ಹಳ್ಳಿಯ ಗೂಂಡಾಗಳನ್ನು ಬೆಚ್ಚಿಬೀಳಿಸಿದರು. ಧುಲಿಯಾದಲ್ಲಿ ಸಾರಾಯಿ ಜಾಡಿಗಳನ್ನು ಒಡೆದರು : ಹೆಂಡತಿಯನ್ನು ಹೊಡೆದವನಿಗೆ ಬೂಟುಗಳ ಹಾರಹಾಕಿ ಕತ್ತೆಯ ಮೇಲೆ ಮೆರವಣಿಗೆ ಮಾಡಿದರು ; ಇನ್ನೆಂದೂ ಹೆಂಡತಿಗೆ ಹೊಡೆಯುವುದಿಲ್ಲವೆಂದು ಅವರಿಂದ ಮಾತು ತೆಗೆದುಕೊಂಡರು. ಶಹದಾ ಚಳುವಳಿಯಲ್ಲಿ ತಪ್ಪಿತಸ್ಥ ಗಂಡಂದಿರನ್ನು ಶಿಕ್ಷಿಸುವ ಮೂಲಕ ಸಾರಾಯಿ ಸೇವನೆ ಮತ್ತು ಮಾರಾಟದ ವಿರುದ್ಧದ ಪ್ರತಿಭಟನೆಯಲ್ಲದೆ, ನೇರವಾಗಿ ಹೆಂಡತಿಯನ್ನು ಹೊಡೆಯುವವರ ವಿರುದ್ಧದ, ಮಹಿಳೆಯರ ಕೌಟುಂಬಿಕ ಹಿಂಸೆಯ ವಿರುದ್ಧದ ಚಳುವಳಿಯಾಗಿ ಮಾರ್ಪಟ್ಟಿತು.

---

ಯಾಗಿದ್ದವು. ಹೆಂಡತಿ ಕೂಲಿನಾಲಿ ಮಾಡಿ ತಂದಿಟ್ಟಿದ್ದ ರಾಗಿಗೆ ದೀಪಕ್ಕೆ ತಂದಿದ್ದ ಸೀಮೆಎಣ್ಣೆಯನ್ನು ಸುರಿದಿದ್ದ. ಹೊಡೆತ ಮಾಮೂಲಾಗಿದ್ದರೂ ಈ ರೌದ್ರಾವತಾರದಿಂದ ಹೆದರಿದ ಹೆಂಡತಿ ಮಕ್ಕಳು ಮನೆಬಿಟ್ಟು ಯಾರದೋ ಮನೆಯಲ್ಲಿ ಆಶ್ರಯ ಪಡೆದಿದ್ದರೆ ಅಪ್ಪನ ಇದ್ದಳು. ಅಲ್ಲೇ ಇದ್ದ ಗಂಡಸರು ಹೆಂಗಸರು ಹಿಂಗೆ ಬಾಯಿ ಮಾಡಿದ್ರೆ ಗಂಡಸರು ಕುಡಿದೇ ಏನ್ಮಾಡ್ತಾರೆ ಅಂತ ಕುಡಿಯುವುದಕ್ಕೆ ಸಮರ್ಥನೆ ಹುಡುಕುತ್ತಿದ್ದರು.

ಸ್ವಲ್ಪ ಹೊತ್ತಿಗೆ ಸಾರಾಯಿಯನ್ನು ಮಾರಾಟ ಮಾಡಲು ಸಹಕರಿಸುತ್ತಿದ್ದ ಹೆಂಗಸನ್ನು ಅಲ್ಲಿಗೆ ಕರೆತರ

ಲಾಯ್ತು. ಆಕೆಯಂತೂ ತುಂಬಾ ಧೈರ್ಯದಿಂದ ತನ್ನ ಕೆಲಸವನ್ನು ಸಮರ್ಥಿಸಿಕೊಂಡಳು. "ನನ್ನ ಮನೇಲೇ ಸಾರಾಯಿ ಮಾರಿದ್ರೂ ನನ್ನ ಗಂಡ ಸಾರಾಯ ಮುಟ್ಟದ ಹಾಂಗ ನಾನು ಇಟ್ಟುಕೊಂಡಿದ್ದೀನಿ, ತಾಕತ್ತಿದ್ರೆ ನೀವು ನಿಮ್ಮ ನಿಮ್ಮ ಗಂಡದೀರ್ನ ನಿಮ್ಮ ಮನೇಲಿ ಮಡಕಳಿ" ಅಂತ ಹೆಂಗಸರಿಗೆ ಸವಾಲೆಸೆದಳು. "ಗ್ರಾಮ ಪಂಚಾಯ್ತಿ ಅಧ್ಯಕ್ಷ್ರು ನನಗೆ ಮನೆ ಕೊಡಿಸವ್ರೆ ಆ ಋಣ ನನ್ಮೇಲಿದೆ. ಅವ್ರು ಸಾರಾಯಿ ಮಾರು ಅಂದಾಗ ನಾನು ಹೆಂಗೆ ಇಲ್ಲಾ ಅನ್ಲಿ ?"–ಹೀಗೆ ಸಾಗಿತ್ತು ಅವಳ ಮಾತಿನ ಧಾಟಿ.

ಆದರೆ ಬೇರೆ ಹೆಂಗಸರ ಅನುಭವ ಬೇರೆಯದೇ ಆಗಿತ್ತು. ಅವರೆಲ್ಲಾ ಸುಖ ಸಂತೋಷ ಪ್ರೀತಿ ಪ್ರೇಮ ಎಲ್ಲಾ ಕೇವಲ ಸಿನೇಮಾ ನಾಯಕರಿಗೆ ಮಾತ್ರ ಎಂದು ಭಾವಿಸಿದ್ರು. "ಕುಡುದ ಬರ್ತಾರೆ, ದುಡ್ಡೂ ಕಾಸು ಏನೂ ಕೊಡಲ್ಲ, ಬಿಸಿ ಊಟ ಮಾತ್ರ ಕೇಳ್ತಾರೆ, ಉಂಡು ಮಲಗಿದರೆ ಸಾಕು ಅನಿಸ್ತದೆ, ಹೊಡಿದಿದ್ರೆ ಸಾಕು, ನಾವು ದುಡಿದ ಕೂಲಿಕೇಳದಿದ್ರೆ ಸಾಕು, ಹೇಗೋ ಬದುಕ್ತೀವಿ." ಬಹಳಷ್ಟು ಹೆಂಗಸರು ವ್ಯಕ್ತಪಡಿಸಿದ ಅಭಿಪ್ರಾಯ ಇದೇ ಆಗಿತ್ತು.

ಹುಣಸೂರು ತಾಲ್ಲೂಕಿನಲ್ಲಿ ಕೆಲವು ಸ್ವಯಂಸೇವಾ ಸಂಸ್ಥೆಗಳು 'ಹೆಂಡ ಬಿಡಿ, ಬೀಡಿ ಬಿಡಿ' ಅಂತ ಪ್ರಚಾರ ಮಾಡಿ ಸಭೆ, ಮೆರವಣಿಗೆ ಸಂಘಟಿಸಿದವು. ಹುಣಸೂರಿನಲ್ಲಿ ಭಾರೀ ಮೆರವಣಿಗೆ ನಡೆಯಿತು. ನಂತರ ನಾನು ಭೇಟಿಯಾದ ಕೆಲವು ಮಹಿಳೆಯರು ತುಂಬ ನೊಂದುಕೊಂಡು ಮಾತನಾಡಿದರು. "ಪಟ್ಟಣದಿಂದ ಜನ ಬರ್ತಾರೆ, ಸಭೆ ಮಾಡ್ತಾರೆ, ಮೆರವಣಿಗೆ ಮಾಡ್ತಾರೆ. ನಾವು ಒಂದು ದಿನದ ಕೂಲಿ ಕಳಕೊಂಡು ಬರ್ತೀವಿ, ಆಮೇಲೆ ಏನಾಗುತ್ತೆ? ಹೆಂಡದ ಗುಡ್ಯ ಕಿತ್ತೋ, ಹುಣಸೂರು ಬೀದೀಲಿ ಮೆರವಣಿಗೆ ಹೋದ್ರೋ, ಮಾರನೆ ದಿನ ಗಂಡಸಗೋಳು ಕುಡುದು ಬಂದು ಏನು ಕಿತ್ತುಕೊತ್ತೀರ ನಮ್ಮ ಹತ್ತರ, ಹೆಂಡದ ಗುಡ್ಯ ಕಿತ್ತರಲ್ಲ ಅಂತ ಹಂಗ್ಸಿದ್ರು. ನಮ್ಮನ್ನ ಕುಡದ ಗ್ಯಾನದಲ್ಲಿ ಹೀನಾಮಾನ ಅಂದ್ರು. ಯಾಕವ್ವ ನಮಗೆ ಇಂಥ ಅವಮಾನ! ಮಾಡಾಧಾದ್ರ ಸರಿಯಾಗಿ ಕೆಲಸ ಮಾಡಿ, ಸರ್ಕಾರಕ್ಕೆ ಹೇಳಿ ಸಾರಾಯಿ ಅಂಗಡಿ ಬಂದ್ ಮಾಡ್ಸಿ. ಸರ್ಕಾರವೇ ಒಪ್ಪಿದ್ಮೇಲೆ ನಿಮ್ಮದೇನು ಹೆಂಗಸರದು ಅಂತಾರಲ್ಲ, ಸರ್ಕಾರದಲ್ಲಿ ಅದನ್ನ ಬದಲಾಯಿಸುವುದಕ್ಕಾಗಲ್ವ" ಅಂತ ನಿರರ್ಗಳವಾಗಿ ಮಾತನಾಡಿದ ವೃದ್ಧೆಯನ್ನು ಬೆಕ್ಕಸ ಬೆರಗಾಗಿ ನೋಡುತ್ತ ನಿಂತೆ.

ಪಿರಿಯಾಪಟ್ಟಣದ ಬೂದಿತಿಟ್ಟಿನಲ್ಲಿ ಕೆಲವೇ ದಿನಗಳಲ್ಲಿ ಮತ್ತೆ ಸಾರಾಯಿ ಅಂಗಡಿ ತನ್ನ ದಿನನಿತ್ಯದ ಚಟುವಟಿಕೆಯಲ್ಲಿ ತೊಡಗಿತ್ತು. ಮಹಿಳೆಯರು ಸತತವಾಗಿ ಹೋರಾಡುವ ಸ್ಥಿತಿಯಲ್ಲಿರಲಿಲ್ಲ. ಒಂದು ದಿನ ಧರಣಿ ಕೂತರೆ, ಚಳವಳಿಗೆ ಓಡಾಡಿದರೆ ಕೂಲಿ ಇಲ್ಲ. ಕೂಲಿ ಇಲ್ಲದಿದ್ದರೆ ಇಡೀ ಕುಟುಂಬ ಹಸಿದಿರುವ ಪರಿಸ್ಥಿತಿ. ಈ ಮಹಿಳೆಯರನ್ನು ಸಂಘಟಿಸುವ, ಅವರಿಗೆ ನೈತಿಕ ಸ್ಥೈರ್ಯ ತುಂಬುವ, ಆರ್ಥಿಕ ನೆರವು ನೀಡಬಲ್ಲ ಪ್ರಭಾವಿ ಸಂಘ ಸಂಸ್ಥೆಗಳು ನಮ್ಮಲ್ಲಿಲ್ಲ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ವಿದೇಶಿ ನೆರವಿನ ಸ್ವಯಂಸೇವಾ ಸಂಸ್ಥೆಗಳು ಈ ಬಗೆಯ ಮೂಲಭೂತ ಸಮಸ್ಯೆಗಳಿಗೆ ಸ್ಪಂದಿಸುವುದಿಲ್ಲ. ಪ್ರಬಲವಾದ ಮಹಿಳಾ ಸಂಘಟನೆಗಳ ಕಾರ್ಯಕರ್ತರು ನಮ್ಮಲ್ಲಿಲ್ಲ. ಪಟ್ಟಣದಿಂದ ವಾರಕ್ಕೊಮ್ಮೆಯೋ ತಿಂಗಳಿಗೊಮ್ಮೆಯೋ, ಅಧ್ಯಯನಕ್ಕೋ, ಸಂಶೋಧನೆಗೋ ಹೋಗುವವರಿಂದ ಮಹತ್ವದ್ದನ್ನು ನಿರೀಕ್ಷಿಸುವಂತಿಲ್ಲ. ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಸಂಪೂರ್ಣವಾಗಿ ತಮ್ಮನ್ನು ಆಂದೋಳನಕ್ಕೆ ಅರ್ಪಿಸಿಕೊಂಡಂಥ ಕಾರ್ಯಕರ್ತರು ಸ್ವಯಂಸೇವಕರಿಂದ ಮಾತ್ರ ಸಾರಾಯಿಯ ಬೃಹತ್ ಜಾಲವನ್ನು ಭೇದಿಸಬಹುದೇನೊ. ಮೇಲ್ನೋಟಕ್ಕೆ ಸಾರಾಯಿ ಬಾಬ್ತಿನಿಂದ ಬರುವ ಆದಾಯ ಸರ್ಕಾರಕ್ಕೆ ಖೋತಾ ಆದ ಹಾಗೆ ಕಾಣಬಹುದು. ಆದರೆ ಹಳ್ಳಿಗಳಲ್ಲಿ ಸಾಕ್ಷರತೆ ಪ್ರಮಾಣ ಹೆಚ್ಚಲು, ಜನರ ಆರೋಗ್ಯ ಸುಧಾರಿಸಲು, ಕೌಟುಂಬಿಕ ನೆಮ್ಮದಿ ನೆಲೆಸಲು ಖಂಡಿತ ಪಾನನಿರೋಧ ಸಹಾಯಕವಾಗುತ್ತದೆ.

ಗ್ರಾಮಪಂಚಾಯ್ತಿಗಳಲ್ಲಿ ಹೆಚ್ಚಿರುವ ಮಹಿಳಾ ಪ್ರಾತಿನಿಧ್ಯ ಸಾರಾಯಿ ವಿರುದ್ಧ ಹೋರಾಡಲು ಸಶಕ್ತವಾಗಬಲ್ಲುದೇ? ನನಗಂತೂ ತೀವ್ರ ಅನುಮಾನವಿದೆ. ಮಹಿಳೆಯರು ರಾಜಕೀಯ ಪ್ರವೇಶಿಸಿದ್ದರೂ, ನಿಯಂತ್ರಕರು ಪುರುಷರೇ ಆಗಿದ್ದಾರೆ. ರಾಜಕೀಯದಲ್ಲಿನ ಮಹಿಳೆಯರು ಸಾರಾಯಿ ನಿಯಂತ್ರಿಸುವುದಿರಲಿ ಅವರೇ ಸಾರಾಯಿ ಲಾಭಿಯ ನಿಯಂತ್ರಣಕ್ಕೆ ಒಳಗಾದರೆ ಎಂಬ ಆತಂಕ ನನ್ನನ್ನು ತೀವ್ರವಾಗಿ ಕಾಡುತ್ತಿದೆ. ●

# ಮಹಿಳೆ ಹಿಂಸೆ ಮತ್ತು ಮದ್ಯಪಾನ

ಪುರುಷರ ಮಧ್ಯಪಾನದ ದೌರ್ಬಲ್ಯಕ್ಕೆ ಮಹಿಳೆಯರು ಮತ್ತು ಮಕ್ಕಳು ಸಾಮಾಜಿಕ, ದೈಹಿಕ, ಮಾನಸಿಕ, ಆರ್ಥಿಕ ಹಾಗೂ ಲೈಂಗಿಕ ಶೋಷಣೆ ಹಾಗೂ ಹಿಂಸೆಗೆ ಬಲಿಯಾಗುತ್ತಿರುವುದರಲ್ಲಿ ಹೊಸತೇನೂ ಇಲ್ಲ. ಮಾನವನ ಇತಿಹಾಸ ಮತ್ತು ನಾಗರಿಕತೆ ಆರಂಭವಾದಂದಿನಿಂದಲೂ ಎಲ್ಲಾ ಸಮಾಜಗಳಲ್ಲಿ ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿ ಮಹಿಳೆಯ ಮೇಲಿನ ಹಿಂಸೆ ನಡೆಯುತ್ತಲೇ ಇರುವುದನ್ನು ಕಾಣುತ್ತೇವೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ದುಶ್ಚಟಕ್ಕೆ ಮಹಿಳೆಯರು ಹೆಚ್ಚು ಹೆಚ್ಚು ಬಲಿಯಾಗುತ್ತಿರುವುದು ಮನವರಿಕೆಯಾಗುತ್ತಿದೆ. ಇದು ಒಂದು ಮಹತ್ವದ ವ್ಯಾಪಕವಾದ ಹಾಗೂ ಆಳವಾಗಿ ಬೇರುಬಿಟ್ಟಿರುವ ವೈದ್ಯಕೀಯ ಸಾಮಾಜಿಕ, ಮಾನಸಿಕ, ಆರ್ಥಿಕ, ನೈತಿಕ, ಕೌಟುಂಬಿಕ ಸಮಸ್ಯೆಯಾಗಿ ಪರಿಣಮಿಸಿದೆ. ಈ ಸಮಸ್ಯೆಯು ಅರಿವು ಹೆಚ್ಚುತ್ತಿದೆಯಾದರೂ, ಅಗತ್ಯ ಗಮನ ಹಾಗೂ ಕ್ರಿಯಾಶೀಲತೆ ಈ ದಿಕ್ಕಿನಲ್ಲಿ ಕಂಡುಬರುತ್ತಿಲ್ಲ. ಕಾರಣ, ಮಹಿಳೆಯರ ಮೇಲಿನ ಹಿಂಸೆ ಹೆಚ್ಚು ಸಂದರ್ಭಗಳಲ್ಲಿ ವರದಿಯಾಗದೆ ಉಳಿದುಬಿಡುವುದು.

ಸಮಸ್ಯೆಯು ವ್ಯಾಪಕತೆ ಎಷ್ಟು ಎಂದು ಊಹಿಸುವುದು ಅಷ್ಟು ಸುಲಭವಲ್ಲವಾದರೂ ಅಲ್ಲಲ್ಲಿ ನಡೆದ ಕೆಲವು ಅಧ್ಯಯನಗಳಿಂದ ಹಿಂಸೆಯ ಪ್ರಮಾಣದ ಒಂದು ಅಂದಾಜು ಮಾಡಬಹುದಾಗಿದೆ.

ಒಬ್ಬ ಹಿರಿಯ, ನಿಷ್ಠ ಪೋಲಿಸ್ ಅಧಿಕಾರಿಯಾದ ಶ್ರೀಮತಿ ಕಿರಣ್ ಬೇಡಿ (1988) ಯವರ ಅನುಭವದ ಮಾತನ್ನು ಗಮನಿಸಿದರೆ, ಗಂಡಸಿನ ಅತಿ ಮದ್ಯಸೇವನೆ, ಮಹಿಳೆ ಅದರಲ್ಲೂ ಹೆಂಡತಿಯ ಮೇಲಿನ ಹಿಂಸೆಯಲ್ಲಿ ಪರ್ಯಾವಸಾನಗೊಳ್ಳುತ್ತದೆ. ಹಾಗೆಂದು ಸೋದರಿ, ತಾಯಿ, ಮಗಳು, ಸೊಸೆ ಮುಂತಾದವರು ಇದಕ್ಕೆ

ಒಂದು ಸಮೀಕ್ಷೆಯ ಪ್ರಕಾರ, ಮದ್ಯಪಾನದ ಚಟಕ್ಕೆ ಬಲಿಯಾದವರಲ್ಲಿ ಶೇ 18ರಿಂದ 20 ಮಂದಿ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಮೇಲ್ಮಟ್ಟದವರಾಗಿರುತ್ತಾರೆ. ಸುಮಾರು ಶೇ. 85ರಿಂದ 90 ಮಂದಿ ಸಾಮಾಜಿಕ ಹಾಗೂ ಆರ್ಥಿಕವಾಗಿ ಕೆಳಮಟ್ಟದವರಾಗಿರುತ್ತಾರೆ. ಇನ್ನೊಂದು ಬೆಚ್ಚಿಬೀಳಿಸುವ ಸಂಗತಿಯೆಂದರೆ, ಮೊದಲ ಗುಂಪಿನಲ್ಲಿ ಶೇ 5ರಷ್ಟು ಹಾಗೂ ಎರಡನೆಯ ಗುಂಪಿನಲ್ಲಿ ಶೇ. 25ರಷ್ಟು ಮಂದಿ 15-25 ವಯೋಗುಂಪಿನವರಾಗಿರುತ್ತಾರೆ.

ಗಂಡ-ಹೆಂಡಿರಿಬ್ಬರೂ ದುಡಿಯುವ ಶೇ 75ರಷ್ಟು ಕುಟುಂಬಗಳಲ್ಲಿ ಮದ್ಯಪಾನದ ಚಟಕ್ಕೆ ಬಲಿಯಾದ ಗಂಡಸ ನೂರಕ್ಕೆ ನೂರರಷ್ಟು ವರಮಾನವಷ್ಟೇ ಅಲ್ಲ, ಹೆಂಡತಿಯ ವರಮಾನದ ಶೇ. 25ರಷ್ಟು ಕೂಡ ಮದ್ಯಪಾನಕ್ಕೆ ಖರ್ಚಾಗುತ್ತದೆ. ಇನ್ನುಳಿದ ಶೇ. 25ರಷ್ಟು ಕುಟುಂಬಗಳಲ್ಲಿ ಶೇ. 5ರಷ್ಟು ಕುಟುಂಬಗಳು ಮದ್ಯಪಾನದಿಂದ ದೂರವಿರುತ್ತವೆ. ಉಳಿದ ಶೇ 20ರಷ್ಟು ಕುಟುಂಬಗಳು ಅರೆ ಕುಡುಕರನ್ನು ಹೊಂದಿರುತ್ತವೆ.

ಶೇ. 25ರಷ್ಟು ಕುಟುಂಬಗಳಲ್ಲಿ ಪ್ರತಿದಿನವೂ ಮದ್ಯಪಾನ ನಡೆಯುವುದನ್ನು ಕಾಣುತ್ತೇವೆ. ಇಂಥ ಕುಟುಂಬಗಳು ಸಮಾಜದ ಮೇಲ್ವರ್ಗಕ್ಕೆ ಸೇರಿರುತ್ತವೆ. ಇಲ್ಲಿ ಆರ್ಥಿಕ ಪರಿಸ್ಥಿತಿ ಹದಗೆಡುವುದಿಲ್ಲವಾದರೂ,ಕೌಟುಂಬಿಕ ಜೀವನಹದಗೆಡುವುದರಲ್ಲಿ ಸಂಶಯವಿಲ್ಲ. ಇತ್ತೀಚಿನ ವರದಿಗಳು ಹೇಳುವಂತೆ 26 ಮಂದಿಯಲ್ಲಿ ಒಬ್ಬರು ಅಥವಾ 80 ದಶಲಕ್ಷ ಮಂದಿಯಲ್ಲಿ 3 ದಶಲಕ್ಷಮಂದಿ ಭಾರತೀಯರು ಮದ್ಯಪಾನದ ಚಟಕ್ಕೆ ಬಲಿಯಾಗಿದ್ದಾರೆ. ಇಲ್ಲಿನ ಆಸ್ಪತ್ರೆಗಳ ಮನೋರೋಗಿಗಳ ವಾರ್ಡುಗಳಲ್ಲಿ ಶೇ. 25 ರಷ್ಟು ಮಂದಿ ಮದ್ಯಪಾನದ ಚಟವುಳ್ಳವರಾಗಿದ್ದಾರೆ.

## ಕರ್ನಾಟಕದ ರಾಜಧಾನಿ ಬೆಂಗಳೂರಿನ ಜನಸಂಖ್ಯೆ, ಸಾರಾಯಿ ದೊರೆಯುವ ಸ್ಥಳಗಳು, ಉತ್ಪಾದನೆ ಹಾಗೂ ಅದರಿಂದ ಬರುವ ಆದಾಯ

| | | | | |
|---|---|---|---|---|
| 1. | ಜನಸಂಖ್ಯೆ (1991) | 48,59,160 | | |
| 2. | ಕೊಳೆಗೇರಿಗಳು | ಸುಮಾರು 140 | | |
| 3. | ಆಲ್ಕೊಹಾಲ್ ಸಿಗುವ ಸ್ಥಳಗಳು | ಅ. ಮಧ್ಯದಂಗಡಿಗಳು | — | ಸುಮಾರು 3,000 |
| | | ಆ. ಸಾರಾಯಿ ಅಂಗಡಿಗಳು | — | ಸುಮಾರು 2,000 |
| | | ಇ. ಪಬ್ ಮತ್ತು ಬಾರ್‌ಗಳು | — | ಸುಮಾರು 1,000 |
| 4. | ಆಲ್ಕೊಹಾಲ್ ಸೇವನೆ | ಅ. 1971 | — | 16.53 ಲಕ್ಷ ಲೀಟರುಗಳು |
| | | ಆ. 1991 | — | 48·30 " " |
| | | ಇ. 1992 | — | 56.20 " " |
| | | | | ಕೋಟಿ ರೂಪಾಯಿಗಳು |
| 5. | ಐಎಂಎಫ್‌ಎಲ್‌ನಿಂದ ಆದಾಯ | ಅ. ಸಾರಾಯಿ ಹರಾಜು | 1992 | ರೂ. 89,420 |
| | | ಆ. ಸಗಟು | | ರೂ. 75,000 |
| | | ಇ. ಚಿಲ್ಲರೆ | | ರೂ. 40,000 |
| | | ಈ. ಹೋಟೆಲ್ ಮತ್ತು ಬಾರುಗಳು | | ರೂ. 20,000 |

**ಟಿಪ್ಪಣಿ :** ಈ ಅಂಕಿ ಅಂಶಗಳನ್ನು ಡಾ. ವನಜ ಎಸ್. ಕುಮಾರ್‌ರವರ 'ಬಿಹೇವಿಯರಲ್ ಮ್ಯಾಲಿಗ್ನೆನ್ಸಿ' – ಆಲ್ಕೋಹಾಲಿಸಂ ಅ ಬ್ಲೀಕ್ ಫ್ಯೂಚರ್' ಎಂಬ ಲೇಖನದಿಂದ ತೆಗೆದುಕೊಳ್ಳಲಾಗಿದೆ.

## ಆರ್ಥಿಕತೆ

### ಮದ್ಯಪಾನ ಮಾಡುವವರು

| ವರ್ಗಗಳು | ಪುರುಷರು | ಮಹಿಳೆಯರು | ಹುಡುಗರು | ಹುಡುಗಿಯರು | ಪ್ರತಿದಿನದಲ್ಲಿ ಮಾಡುವ ಖರ್ಚು |
|---|---|---|---|---|---|
| ಮೇಲ್ಮಟ್ಟದ ಆದಾಯ (ರೂ. 20,000 ಹಾಗೂ ಅದಕ್ಕಿಂತ ಹೆಚ್ಚು ಮಾಸಿಕ ಆದಾಯ) | 48 | 14 | 20 | 5 | ರೂ. 200 ರಿಂದ 500ರ ವರೆಗೆ |
| ಮಧ್ಯಮ ಮಟ್ಟದ ಆದಾಯ (ಮಾಸಿಕ ರೂ. 10,000 ದಿಂದ 19,000ರವರೆಗೆ) | 52 | ಗಣನೀಯ ಪ್ರಮಾಣದಲ್ಲಿಲ್ಲ | 20 | ಇಲ್ಲ | ರೂ. 100 ರಿಂದ 200ರ ವರೆಗೆ |
| ಕೆಳಮಟ್ಟದ ಆದಾಯ (ಮಾಸಿಕ ರೂ. 1,000 ರಿಂದ ರೂ. 9,000ರ ವರೆಗೆ) | 64 | 21 | 10 | ಇಲ್ಲ | ರೂ. 60 ರಿಂದ 100ರ ವರೆಗೆ |

1. ಪಬ್‌ಗಳಲ್ಲಿ ಮದ್ಯಸೇವನೆ ಮಾಡುವ 500 ಮಂದಿ ಯುವಜನಾಂಗದವರಲ್ಲಿ 100 ಮಂದಿ ಹುಡುಗಿಯರಾಗಿರುತ್ತಾರೆ. (13 ವರ್ಷಗಳಿಂದ 19 ವರ್ಷ ವಯಸ್ಸಿನವರು)
2. ಆಲ್ಕೋಹಾಲಿನ ಸೇವನೆ ಕೆಳಮಟ್ಟದ ಆದಾಯವಿರುವ ಗುಂಪುಗಳಲ್ಲಿ ಹೆಚ್ಚಾಗಿದೆ.
3. ಮದ್ಯಪಾನಗಳಲ್ಲಿ ಧೂಮಪಾನದ ಪ್ರಮಾಣ ಹೆಚ್ಚು.

ಈ ಅಂಕಿ ಅಂಶಗಳ ಪಟ್ಟಿಯನ್ನು ಡಾ. ವನಜ ಎಸ್. ಕುಮಾರ್‌ರವರ 'Behavioural Malignancy – Alcoholisn A Bleak Future' ಲೇಖನದಿಂದ ತೆಗೆದುಕೊಳ್ಳಲಾಗಿದೆ.

ಹೊರತಾಗಿರುವುದಿಲ್ಲ. ಹೆಂಡತಿ ಮಾತ್ರವಲ್ಲ. ಮಕ್ಕಳೂ ಸಂಕಷ್ಟಗಳಿಗೀಡಾಗುತ್ತಾರೆ (ಮೆಹ್ತಾ 1988). ಶೇಕಡ 60ರಷ್ಟು ಕೌಟುಂಬಿಕ ಹಿಂಸೆಯ ಪ್ರಕರಣಗಳಲ್ಲಿ ಗಂಡನ ಅತಿ ಕುಡಿತದ ಚಟವೆ ಕಾರಣವೆನ್ನಲಾಗಿಡೆ. (ಮಹಾಜನ 1985).

ಇಂಟಿಗ್ರೇಟೆಡ್ ಹ್ಯೂಮನ್ ಡೆವಲಂಪ್‌ಮೆಂಟ್ ಸರ್ವೀಸಸ್ ಫೌಂಡೇಶನ್ ಎಂಬ ಸಂಸ್ಥೆಗೆ ಕೌಟುಂಬಿಕ ಸಲಹೆಗಾಗಿ ಬಂದವರು ಪುರುಷರ ಕುಡಿತದ ಚಟಕ್ಕೆ ಬಲಿಯಾದವರಾಗಿದ್ದರು. ಮಹಿಳೆಯರು ಪ್ರತಿದಿನ ಅಥವಾ ಆಗಾಗ ಕುಡುಕ ಗಂಡಂದಿರಿಂದ ಹೊಡೆತ ತಿನ್ನುವುದು ಮಾತ್ರವಲ್ಲ, ಇನ್ನಿತರ ಹಿಂಸೆಗೆ ಒಳಗಾಗುತ್ತಿದ್ದರೆಂದು ತಿಳಿದುಬಂದಿದೆ ( ಸಿಂಗ್, 1988 ). ಭಯೋತ್ಪಾದನೆ, ಹಿಂಸೆಗೆ ಬಲಿಯಾದ ಮಹಿಳೆಯರ 465 ಪ್ರಕರಣಗಳನ್ನು ಪರಿಶೀಲಿಸಿದಾಗ ಗಂಡಂದಿರ ಕುಡಿತದ ಚಟವೇ ಅಂಥ ಪರಿಸ್ಥಿತಿಗಳಿಗೆ ಕಾರಣಗಳಲ್ಲೊಂದಾಗಿತ್ತು (ವಿನೇಶ್ ಲತಾ 1988). 45 ಮಹಿಳಾ ದೌರ್ಜನ್ಯದ ಪ್ರಕರಣಗಳಲ್ಲಿ 39 ಪ್ರಕರಣಗಳು ಕುಡಿತದ ಚಟಕ್ಕೆ ಸಂಬಂಧಿಸಿದವಾಗಿದ್ದವು (ಕನ್ವಲ್ ಮೋಹನ್, 1988). ಬದಲಾವಣೆಯ ಗಾಳಿಗೆ ಒಡ್ಡಿಕೊಳ್ಳುತ್ತಿರುವ ದಲಿತವರ್ಗದ ಮಹಿಳೆಯರು ತಮ್ಮ ಗಂಡಂದಿರು/ಮಕ್ಕಳು/ಮಾವಂದಿರಿಂದ ಹಿಂಸೆಗೊಳಗಾಗುತ್ತಿದ್ದರು. ಇದಕ್ಕೆ ಮುಖ್ಯ ಕಾರಣ ಅವರ ಅತಿ ಕುಡಿತವೇ ಆಗಿತ್ತು (ರಂಜನ್, 1985)

ತಂದೆ/ಗಂಡ ಅತಿ ಕುಡಿತಕ್ಕೆ ಬಲಿಯಾಗಿದ್ದು ಹೆಂಡತಿ, ಮಕ್ಕಳನ್ನು ಹಿಂಸಿಸುವುದೇ ಚಿಕ್ಕವಯಸ್ಸಿನ ಹುಡುಗಿಯರು ಹಾಗೂ ವಿವಾಹಿತ ಮಹಿಳೆಯರು ಮನೆಯ ಹಿಂಸಾತ್ಮಕ ಪರಿಸ್ಥಿತಿಯಿಂದ ತಪ್ಪಿಸಿಕೊಂಡು ಓಡಿ ಹೋಗುವಂತೆ ಪ್ರೇರೇಪಣೆ ನೀಡುತ್ತದೆ ಹಾಗೂ ವೇಶ್ಯಾ ವೃತ್ತಿಯ ಜಾಲದಲ್ಲಿ ಸಿಲುಕಿಕೊಳ್ಳುವಂತೆ ಮಾಡುತ್ತದೆ ಎಂದು ಭಾರತದಲ್ಲಿ ಕರೆವೆಣ್ಣು (ಕಾಲ್‌ಗರ್ಲ್ಸ್)ಗಳ ಅಧ್ಯಯನ ಮಾಡಿರುವ ಡಾ. ಪ್ರಮಿಳಾಕಪೂರ್ (1978, 82, 85, 87) ಅಭಿಪ್ರಾಯ ಪಡುತ್ತಾರೆ.

ಕುಡುಕ ತಂದೆ / ಮಾವ ಮಗಳು / ಸೊಸೆಯ ಮೇಲೆ ಲೈಂಗಿಕ ಅತ್ಯಾಚಾರವನ್ನೊಳಗೊಂಡಂತೆ ಹಿಂಸಾಚಾರ ನಡೆಸುವುದು ಹಾಗೂ ಗಂಡನಿಂದ ಪ್ರತ್ಯೇಕಗೊಂಡ/ವಿಧವೆ ತಾಯಿಯ ಮೇಲೆ ಕುಡುಕನಾದ ಅವಿವಾಹಿತ ಮಗ ಹಿಂಸಾಚಾರ ನಡೆಸುವ ಪ್ರಕರಣಗಳು ಬೆಳಕಿಗೆ ಬಂದಿದೆ (ನರ್ರೋನಾ, 1988)

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸ್ಕಾಟ್ (1974), ಗೆಲ್ಲಿಸ್ (1976), ರಾಯ್ (1977) ಹಾಗೂ ಕೋಲ್‌ಮನ್ ಮತ್ತು ಸ್ಟ್ರಾಸ್ ಮುಂತಾದವರು ನಡೆಸಿದ ಅಧ್ಯಯನಗಳ ಆಧಾರ ಮೇಲೆ ಶೇ. 40 ರಿಂದ 95ರವರೆಗಿನ ಮಹಿಳೆಯರ ಮೇಲಿನ ದೌರ್ಜನ್ಯದ ಪ್ರಕರಣಗಳು ಮಧ್ಯಪಾನಕ್ಕೆ ಸಂಬಂಧಿಸಿರುತ್ತವೆ ಎಂದು ಹೇಳಬಹುದಾಗಿದೆ (ಲ್ಯಾಂಗಲೀ ಮತ್ತು ಲೆವಿ, 1977). ತಮ್ಮ ಚಿಕಿತ್ಸಾಲಯಕ್ಕೆ ಬಂದ ಪ್ರಕರಣಗಳನ್ನು ಅಧ್ಯಯನ ಮಾಡಿರುವ ಶ್ರೀಮತಿ ಚಕ್ರಧರ (1988) ಕೂಡ ಶೇ. 35-50 ಮಹಿಳಾ ದೌರ್ಜನ್ಯದ ಪ್ರಕರಣಗಳು ಮದ್ಯಪಾನಕ್ಕೆ ಸಂಬಂಧಿಸಿರುತ್ತವೆ ಎನ್ನುತ್ತಾರೆ.

ಇವೆಲ್ಲಾ ಸರ್ವೇಕ್ಷಣೆಗಳು, ವಿಶ್ಲೇಷಣೆಗಳ ಆಧಾರದ ಮೇಲೆ ಹೇಳುವುದಾದರೆ, ಗಂಡಸರು ಮದ್ಯಪಾನದ ಚಟಕ್ಕೆ ಬಲಿಯಾಗುವುದು, ಅದರಿಂದಾಗಿ ಮಹಿಳೆಯರು ಹಿಂಸೆಗೊಳಗಾಗುವುದು ದಿನೇ ದಿನೇ ಹೆಚ್ಚುತ್ತಾ ಹೋಗಿ ಇಂದು ಅಪಾಯದ ಅಂಚನ್ನು ತಲುಪಿದೆ. ಇದು ಜಾತಿ, ವರ್ಗ, ಧರ್ಮ, ಜನಾಂಗ, ಕುಟುಂಬದ ರಚನೆ/ಗಾತ್ರ/ಮಾದರಿ, ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ, ವಯೋಮಾನ, ಸಾಮಾಜಿಕ-ಸಾಂಸ್ಕೃತಿಕ ಹಿನ್ನೆಲೆಗಳ ಎಲ್ಲೆಗಳನ್ನು ಮೀರಿ ನಿಂತಿದೆ. ಶಿಕ್ಷಿತ ಹಾಗೂ ಶ್ರೀಮಂತ ಕುಟುಂಬಗಳಲ್ಲಿ ದೈಹಿಕ ಹಿಂಸೆ ಇರುವುದಿಲ್ಲ. ಅದು ಕೇವಲ ಮಾನಸಿಕವಾಗಿರುತ್ತದೆ ಎನ್ನುವ ನಂಬಿಕೆಯನ್ನು ಸುಳ್ಳಾಗಿಸಿದೆ (ಅಹುಜ 1988 ; ಕಪೂರ್, 1970).

**—ನೆಂ. ವನಜ**

(ಆಧಾರ)

## ಅಸಂಬದ್ಧ ಪ್ರಲಾಪ

ಎಂದಾದರೊಂದು ದಿನ
ಸಮುದ್ರ ತೀರಕೆ
ಹೋಗಬಯಸುವೆ ;
ಮನೆಯೊಂದ
ಕಟ್ಟಬಯಸುವೆ ;
ಗಿರಿಶಿಖರಗಳೆಡೆ
ಸಾಗಬಯಸುವೆ.

ಒಂಟಿಪಯಣದ
ಆಗಸದಿಂದಿಳಿದ
ಶೂನ್ಯದಮಂಜು
ಧರೆಯ ಮುಸುಕಿದಾಗ
ಧುಮ್ಮಿಕ್ಕುವ ಜಲದಲ್ಲಿ
ಮೀಯಬಯಸುವೆ
ಏರಿದ ಜ್ವರದ ತಾಪದಲ್ಲಿ
ನಡುಗಬಯಸುವೆ

ನನ್ನ ನೋಡಬಯಸದಿದ್ದರೂ
ನೀನು ಬರಲೇಬೇಕು ;
ರೋಗವ ಕಾಣಲು
ಜನ ಬರುತ್ತಾರೆ.

* * *

## ಆತ್ಮಚರಿತ್ರೆ

ನಾಸ್ತಿಕಳಾದ ನಾನು
ಮೋಹಪರವಶ ಕಣ್ಣುಗಳಿಂದ
ನಿಸರ್ಗವ ನಿಟ್ಟಿಸುತ್ತೇನೆ ;
ಪ್ರಗತಿಯ ಕೈಹಿಡಿದು
ಮುಂದೆ ಅಡಿಯುತ್ತೇನೆ ;
ಸಮಾಜದ ಅಂಕುಡೊಂಕಿನ ಹಾದಿ
ನನ್ನ ತೋಳುಗಳ ಜಗ್ಗಿ
ಹಿಂದಕ್ಕೆಳೆಯುತ್ತದೆ.

ನಡುರಾತ್ರಿಯಲಿ
ನಗರದೆಲ್ಲೆಡೆ
ಅಡ್ಡಾಡಬಯಸುತ್ತೇನೆ
ಒಂಟಿಯಾಗಿ
ಒಂದೆಡೆ ಕುಳಿತು
ಕಣ್ಣೀರಿಡಬಯಸುತ್ತೇನೆ.

* * *

ಮತೀಯವಾದಿಗಳು
ಮನೆಗಳ ಒಡೆಯುತ್ತಾರೆ
ಮಾನವೀಯತೆಯಿಂದ
ಮಹಿಳೆಯರ
ದೂರವಿಡುತ್ತಾರೆ
ನಾಸ್ತಿಕಳು
ನಾನು ಛಿದ್ರಗೊಂಡಿದ್ದೇನೆ
ಮಾನವ ಹಕ್ಕುಗಳಿಂದ
ವಂಚಿತಳಾಗಿದ್ದೇನೆ.

ನಿರ್ದಯಿ ರಾಜಕಾರಣಿ
ವರ್ಗಶೋಷಣೆ ಮಾತಾಡುತ್ತಾನೆ
ಭವ್ಯಸ್ವಾಗತ ಪಡೆಯುತ್ತಾನೆ
ಮಹಿಳಾ ಶೋಷಣೆ ಎಂದರೆ
ಪದಗಳ ತಿರುಚುತ್ತಾನೆ
ನನಗೆ ಪರಿಚಿತ
ಇಂಥ ಊಸರವಳ್ಳಿ ಪಾತ್ರ.

ಎಲ್ಲೆಡೆ ಹರಡಿದೆ
ಧರ್ಮದ ಜಾಲ
ಒಂಟಿದನಿಯ ಸವಾಲು
ಎಲ್ಲಿಯ ತನಕ ?
ಎತ್ತೆತ್ತಲೂ ಅಸಮಾನತೆ
ಈ ಬಲೆಯ ಕತ್ತರಿಸುವವರಾರು ?

# ಬಿಡುಗಡೆಯ ಅಂಚಿನಲ್ಲಿ

ನಾನು ಹೋಗಲೇಬೇಕು
ಮತ್ತೆ ಬರಲೆಂಬ ಬಯಕೆ
ಮುಂದಿಗೆ–
ಸೀರೆ ಜಗ್ಗುವ ಮಗು
ಬಾಗಿಲಿಗಡ್ಡ ನಿಲ್ಲುವ ಗಂಡ.

ಕಣ್ಣೆದುರಿದೆ
ಹರಿವನದಿ
ನಾ ಈಜಬಲ್ಲೆ
ದಾಟಬಲ್ಲೆ
ಆದರೆ ಬಿಡಲೊಲ್ಲರು.

ನದಿಯಾಚೆಗಿದೆ
ಬಟ್ಟಬಯಲಶೂನ್ಯ
ಮುಟ್ಟಬಯಸುತ್ತೇನೆ.

ಬೀಸುವ ಗಾಳಿಗೆದುರು
ಓಡಬಯಸುತ್ತೇನೆ
ನರ್ತಿಸಬಯಸುತ್ತೇನೆ

ಬಹುದಿನಗಳಿಂದಾಡದ
ಬಾಲ್ಯದಾಟಗಳ
ಆಡಬಯಸುತ್ತೇನೆ
ಬಹುದಿನಗಳಿಂದ
ಒಂಟಿತನದ
ತೊಡೆಯಮೇಲೆ
ತಲೆಯೂರಿ ಅತ್ತಿಲ್ಲ
ನನ್ನಷ್ಟಕ್ಕೇ ನಾ ಅಳುತ್ತೇನೆ
ಮುಂದೆ ಹರಿವ ನದಿ
ನಾ ಈಜಬಲ್ಲೆ
ನಾನೇಕೆ ಹೋಗಬಾರದು ?
ಹೋಗಲೇಬೇಕು.

–ತಸ್ಲಿಮಾ ನಜರೀನ್
ಅನು : ವೆಂ. ವನಜ

# ಎತಿಲ್ ಲ್ಯಾಂಬರ್ಟ್

ಈಕೆಯನ್ನು ನೋಡಲು ಹೋದಾಗ, ಮನೆಬಾಗಿಲು ತೆರೆದಿತ್ತು. ಸ್ನೇಹಿತ ಕೂಗಿದಾಗ ಉತ್ತರವಿಲ್ಲ. ಇಣುಕಿ ನೋಡಿದಾಗ ಆಕೆ ಮಲಗಿದ್ದರು. ಮೆಲ್ಲಗೆ ಹೋಗಿ ಸದ್ದು ಮಾಡದೆ ಕುಳಿತೆವು. ಸುತ್ತಲು ಕಣ್ಣಾಡಿಸಿದೆ. ಹ್ಯಾಂಗರ್‌ನಲ್ಲಿ ನೇತು ಹಾಕಿದ್ದ ಹಳೆ ಸ್ಕರ್ಟ್, ಗೋಡೆಯ ಮೇಲೆ ಮಗನ, ಗಂಡನ, ಅವಳ ಸಣ್ಣ ವಯಸ್ಸಿನ ಫೋಟೋಗಳು, ಮುರಿದ ಚೇರುಗಳು, ಹಳೆಯ ನೆನಪುಗಳ ಹೊತ್ತ ಮಾಸಲು ಹಾಳೆಗಳು, ಆಲ್ಬಂಗಳು, ಪ್ರತಿಷ್ಟಿತರ ಪತ್ರಗಳು, ನುಗ್ಗಾದ ಡಬ್ಬಗಳು ಎಲ್ಲವು ಆಕೆಯ ಕತೆಯನ್ನು ಪಿಸುಗುಡುತ್ತಿದ್ದವು. ನಿರ್ಜೀವವಾಗಿದ್ದ ಮನೆಯೊಳಗೆ ಜೀವಂತವಾಗಿರುವುದು ನಾನೊಬ್ಬಳೆ ಎನ್ನುವಂತೆ ಆಕೆಯ ಉಸಿರು ಏರಿಳಿಯುತ್ತಿತ್ತು. ಮುದುಡಿ ಮಲಗಿದ್ದರು. ಸಿಂಬುಳ ಮೂಗಿನಿಂದ ಹರಿದು ದಿಂಬಿನ ಮೇಲೆ ನಿಂತಿತ್ತು. ಹಣ್ಣಾದ ಕೂದಲುಗಳು, ಸಾಕ್ಸಿನೊಳಗೆ ಊದಿನಿಂದ ಕಾಲುಗಳು ಸವೆದು ಸುಕ್ಕಾಗಿದ್ದವು. ಮನದೊಳಗಿದ್ದ ಚಿತ್ರಕ್ಕಿಂತಲೂ ದುರಂತಮಯವಾಗಿತ್ತು ಆಕೆಯ ಜೀವನ.

ಜೋರಾಗಿ ಕೆಮ್ಮಿದ ಸದ್ದಿಗೆ ಎಚ್ಚರವಾದರು ಆಕೆ. ಯಾರು, ಏನೆಂದು ತಿಳಿಯಲು ಕೆಲವಾರು ನಿಮಿಷಗಳೇ ಆದವು. ಸ್ನೇಹಿತ ಕಿವಿಯ ಬಳಿ ಹೋಗಿ ಜೋರಾಗಿ ಹೇಳಿದ. "ಸ್ನೇಹಿತರೊಬ್ಬರು ನೋಡಬೇಕೆಂದರು, ಕರೆದುಕೊಂಡು ಬಂದಿರುವೆ." 'ಹಾಗಾ' ಎಂದು ತಲೆಯಾಡಿಸಿದರು. ತಂದಿದ್ದ ಕೇಕಿನ ಪೊಟ್ಟಣವನ್ನು ಆಕೆಯ ಕೈಗೆ ಕೊಟ್ಟ. "Today I have been so luckly, Since morning I am getting many things to eat" ಎಂದರು.

ತಿನ್ನಲು ಸಿಕ್ಕ ಅದೃಷ್ಟವಂತೆ !

ಈಕೆ 87 ವರ್ಷದ ಎತಿಲ್ ಲ್ಯಾಂಬರ್ಟ್ ಶಿಕ್ಷಕಿಯಾಗಿ, ದಿಲ್ಲಿ, ಮದರಾಸು, ತಿರುಚನಾಪಳ್ಳಿ ಹಾಗು ಬೆಂಗಳೂರಿನ ಪ್ರತಿಷ್ಟಿತ ಶಾಲೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ.



ಇಂಗ್ಲೀಷ್ ವ್ಯಾಕರಣ, ಇಂಗ್ಲಿಷ್ ಕಾವ್ಯಗಳನ್ನು ಅನೇಕ ಮಕ್ಕಳಿಗೆ ಹೇಳಿಕೊಟ್ಟಿದ್ದಾರೆ. ಅನೇಕ ಪ್ರತಿಷ್ಠಿತರ ಮಕ್ಕಳಿಗೆ ಪಾಠ ಹೇಳಿಕೊಟ್ಟಿರುವ ಈಕೆಯ ವಿದ್ಯಾರ್ಥಿಗಳು ಸೇನಾಪಡೆ, ವಾಯುಪಡೆ, ಕ್ಯಾಪ್ಟನ್‌ಗಳು, ವಾಣಿಜ್ಯೋದ್ಯಮಿಗಳು, ಸರ್ಕಾರದ ವರಿಷ್ಟ ಅಧಿಕಾರಿಗಳು ಆಗಿದ್ದಾರೆ. ರಾಷ್ಟ್ರಪತಿ ಭವನಕ್ಕೆ ಬಂದು ತಮ್ಮ ಮಗನಿಗೆ ಪಾಠ ಹೇಳಬೇಕೆಂದು, ಆಗಿನ ರಾಷ್ಟ್ರಪತಿ ವಿ.ವಿ. ಗಿರಿಯವರ ಮಗಳು ಮೋಹಿನಿ ಗಿರಿಯವರು ಬರೆದಿರುವ ಕಾಗದವನ್ನು ಜೋಪಾನವಾಗಿಟ್ಟುಕೊಂಡಿದ್ದಾರೆ. ದಿಲ್ಲಿಯ ಸೇಂಟ್ ಕೊಲಂಬಸ್ ಶಾಲೆ

○ ಸರಸ್ವತಿ ದು.

ಯಲ್ಲಿ ಶಿಕ್ಷಕಿಯಾಗಿದ್ದಾಗ ರಾಜೀವ್‌ಗಾಂಧಿ, ಸಂಜಯ್ ಗಾಂಧಿ ಅದೇ ಶಾಲೆಯ ವಿದ್ಯಾರ್ಥಿಗಳಾಗಿದ್ದರು. 23 ವರ್ಷಗಳ ಕಾಲ ಆ ಶಾಲೆಯಲ್ಲಿ ದುಡಿದ ಆಕೆ, ರಜ ತೆಗೆದುಕೊಂಡದ್ದು ಒಂದೇ ಒಂದು ದಿನ ! ಅದು ಆಕೆಯ ಮಗ ತೀರಿಕೊಂಡಾಗ. ಆ ಶಾಲೆಯ ವಾರ್ತಾ ಪತ್ರದಲ್ಲಿ ಆಕೆಯ ಅಗಲುವಿಕೆಯನ್ನು ದುಃಖಿಸಿ ಬರೆದ ಲೇಖನ, ಅವರ ನಿಷ್ಠಾವಂತ ಸೇವೆ, ಇತರರೊಂದಿಗಿಂದ ಪ್ರೀತಿ, ವಿಶ್ವಾಸವನ್ನು ವ್ಯಕ್ತಪಡಿಸುತ್ತದೆ.

ತಮ್ಮ ವೃತ್ತಿಯ ಕೊನೆಯ ಹನ್ನೊಂದು ವರ್ಷವನ್ನು ಅವರು ಬೆಂಗಳೂರಿನ ಬಿಥನಿ ಶಾಲೆಗಾಗಿ ದುಡಿದರು. ಶಾಲೆಯು ಲ್ಯಾಂಗ್ ಫೋರ್ಡ್ ರೋಡಿನಿಂದ

ಕೋರಮಂಗಲಕ್ಕೆ ವರ್ಗಾವಣೆಯಾದಾಗ, ವ್ಯವಸ್ಥಾಪಕರ ಒತ್ತಡದ ಮೇರೆಗೆ ಅವರು ಕೆಲಸಕ್ಕೆ ರಾಜೀನಾಮೆ ಇತ್ತರು. ನಿವೃತ್ತ ಜೀವನ ನರಕವಾಯ್ತು. ಕಡೆಯ ದಿನಗಳಲ್ಲಿ ಬಂಧು-ಬಳಗ ಯಾರೂ ಇಲ್ಲದೆ, ಜೀವನೋಪಾಯಕ್ಕಾಗಿ ಅವರಿವರನ್ನು ಆಶ್ರಯಿಸಿಬೇಕಾದ ಸ್ಥಿತಿ. ತಾವು ಕೆಲಸ ಮಾಡಿದ ಎಲ್ಲ ಶಾಲೆಗಳಿಗೂ ಪತ್ರ ಬರೆದಿದ್ದಕ್ಕೆ ಯಾರಿಂದಲೂ ಉತ್ತರಲಿಲ್ಲ. ಊಟಕ್ಕೂ ಯಾರನ್ನಾದರು ಯಾಚಿಸಬೇಕಾದ ಪರಿಸ್ಥಿತಿ.

ಪಾಠ ಹೇಳಿ ಕೊಡುವುದನ್ನು ಏಸುವಿನ ಸೇವೆಯೆಂದು ನಂಬಿ ದುಡಿದ ಅವರಿಗೆ 'ಶಿಷ್ಟಸಮಾಜದ' ಕೊಡುಗೆ– ಅವರನ್ನು ಕಡಗಳಿಗೆಯಲ್ಲಿ ದಯನೀಯ ಸ್ಥಿತಿಗೆ ತಳ್ಳಿದ್ದು. ಶ್ರದ್ಧೆಯಿಂದ, ಸುಂದರ ಅಕ್ಷರಗಳಲ್ಲಿ ಬರೆದ Lesson Plan ಗಳು, ನಾಳೆ ಏನು ಪಾಠ ಮಾಡಬೇಕೆಂದು ಬರೆದ ಡೈರಿಗಳು, ಇಂಗ್ಲೀಷ್ ಪದಗಳಿಗೆ ಅರ್ಥ ಹೇಳಲು ಬರೆದ ಚಿತ್ರಗಳು ಎಲ್ಲಾ ಆಕೆಯ ಪ್ರಮಾಣಿಕತೆಯ ಸಾಕ್ಷಿಗಳಾಗಿ ಮಾಸಲಾಗಿವೆ. ಬರುತ್ತೇವೆ ಎಂದು ಹೇಳಿ ಹೊರಟು ಬಂದೆವು. ಏನಾದರು ಮಾಡಬೇಕೆಂಬ ಯೋಚನೆಯಲ್ಲೇ ದಿನ ಉರುಳುತ್ತಿದ್ದವು. ಹೇಗಿದ್ದಾರೆಂದು ತಿಳಿದುಕೊಳ್ಳಲು ಸ್ನೇಹಿತನಿಗೆ ಫೋನು ಮಾಡಿದೆ. ಆಕೆ ತೀರಿ ಹೋಗಿ ಎರಡು ದಿನಗಳಾದವೆಂದು ತಿಳಿಯಿತು. ಹಸಿರಾಗಿದ್ದಾಗ ತಂಪು ನೀಡಿ ಬರಡಾದಾಗ ಸದ್ದಿಲ್ಲದೆ ಗೆದ್ದಲು ಹಿಡಿದು ಬೀಳುವ ಮರದಂತೆ, ಸುಳಿವಿಲ್ಲದಂತೆ ಹೊರಟುಹೋಗಿದ್ದರು. ತನಗೆ ಬಂದ ಕಷ್ಟಕ್ಕೆ ಯಾರನ್ನು ಆಕೆ ದೂರಲಿಲ್ಲ. ಪ್ರಮಾಣಿಕತೆಗೆ ಸಿಕ್ಕ ಫಲವೇನು ? ಎನ್ನುವ ಪಶ್ಚಾತಾಪವು ಆಕೆಗಿರಲಿಲ್ಲ. ವೃತ್ತಿಯನ್ನು ದೇವರ ಸೇವೆಯೆಂದು ನಂಬಿದ್ದ ಆಕೆ ಶ್ರದ್ಧೆಯ, ಪ್ರಮಾಣಿಕತೆಯ ಸಂಕೇತವಾಗಿ ಎಂದೂ ಜೀವಂತ.



---

## ಸೂಕಿಯ ಬಿಡುಗಡೆ

ಸೂಕಿಯ ಬಿಡುಗಡೆಯಾಗಿದೆ. ಅದೂ ಯಾವುದೇ ನಿಬಂಧನೆಗಳಿಲ್ಲದ ಬಿಡುಗಡೆ. ಇದೊಂದು ಪ್ರಜಾತಂತ್ರಕ್ಕೆ ದಕ್ಕಿದ ಬಹುದೊಡ್ಡ ಗೆಲುವು ಎಂದುಕೊಳ್ಳಬಹುದಾದರೂ ಬಿಡುಗಡೆಯಾಗಿ ಇಷ್ಟು ದಿನಗಳ ನಂತರವೂ ಬರ್ಮಾದಲ್ಲಿ ಯಾವುದೇ ರಾಜಕೀಯ ಇಲ್ಲವೇ ಪ್ರಜಾತಾಂತ್ರಿಕ ಸುಧಾರಣೆಗಳ ಸೂಚನೆಯಿಲ್ಲ. ಹಾಗಾದರೆ ಆಕೆಯ ಬಿಡುಗಡೆ ಮಾಡಿದ್ದಾದರೂ ಯಾತಕ್ಕೆ ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಅಮೆರಿಕಾ, ಜಪಾನು ಸೇರಿದಂತೆ ಅನೇಕ ದೇಶಗಳು, ಮಾನವ ಹಕ್ಕುಗಳ ಮತ್ತು ಪ್ರಜಾತಂತ್ರದ ವಿರೋಧಿಗಳಾದ ಮಿಲಿಟರಿ ಆಡಳಿತಗಾರರ ಬರ್ಮಾದಲ್ಲಿ ಯಾವುದೇ ಹೂಡಿಕೆಗಳನ್ನು ಮಾಡಲು ನಿರಾಕರಿಸುತ್ತಿರುವುದು ಸೂಕಿಯ ಇಂತಹ ಬಿಡುಗಡೆಗೆ ಕಾರಣವಾಯಿತೆಂದು ಒಂದು ಕಡೆಯಿಂದ ತಿಳಿದುಬರುತ್ತಿದೆ.

ಆದೇನೇಯಾದರೂ ಬಿಡುಗಡೆ ಹೊಂದಿದ ಕುಪಿಯಲ್ಲಿರುವ ಸೂಕಿ ತನ್ನ ಬಿಡುಗಡೆಯಾಗುತ್ತಿದ್ದಂತೆಯೇ ಬರ್ಮಾಕ್ಕೆ ಪ್ರಜಾಪ್ರಭುತ್ವ ಬಂದುಬಿಡುತ್ತದೆಂಬ ಭ್ರಮೆಯಲ್ಲಂತೂ ಇಲ್ಲ. ಆದರೆ ಜನಕ್ಕೆ ಪ್ರಜಾಪ್ರಭುತ್ವ ಬೇಕು ಮತ್ತು ಬಹುಕಾಲ ಜನರ ಆಶೋತ್ತರಗಳನ್ನು ಅಮುಕಿ ಇಡಲು ಸಾಧ್ಯವಿಲ್ಲವಾದ್ದರಿಂದ ಬರ್ಮಾ ಪ್ರಜಾಪ್ರಭುತ್ವ ಹೊಂದಿಯೇ ತೀರುತ್ತದೆ ಎನ್ನುತ್ತಾರೆ. ಒಟ್ಟಿನಲ್ಲಿ ಸೂಕಿ ಬರ್ಮಾದ ಪ್ರಜಾತಂತ್ರವಾದಿಗಳ ಆಶಾಕಿರಣವೇ ಇಂದಿಗೂ.

# ಕವನ

ಸುಮ್ಮನೆ
'ಬಾ'
ಎಂದರೆ
ಬರಲಾದೀತೆ ?
ಅಲ್ಲಿಗೆ

ಇಲ್ಲಿ
ಇಟ್ಟ 'ಹೆಜ್ಜೆ'
'ಗಟ್ಟಿ'ಯಾಗಿ
'ನೆಟ್ಟ'ದ್ದು
ಚಿಗುರಾಗಲಿ
'ಹಗುರಾ'ಗಿ
ನಂತರ ಬರುವೆ

ಸುಮ್ಮನೆ
'ಬಾ'
ಎಂದರೆ
ಬರಲಾದೀತೆ ?
'ಎಳೆ'ಗಳು
ನೇಯ್ದ ಬದುಕು
ಕೊಂಚ 'ಮೆಲುಕು ಹಾಕಿ
ಹೊತ್ತು 'ಕಂತಿ'ದ ಮೇಲೆ
ತಂತಾನೆ ಬರುವೆ

ಸುಮ್ಮನೆ
'ಬಾ'
ಎಂದರೆ
ಬರಲಾದೀತೆ ?
'ನೀ' ಬಯಸ'ಬೇಕು
ನಾ 'ಬೇಡ' ಬೇಕು
ಅವಳು 'ಹರಸ'ಬೇಕು
ಆಗ ಸರ್ರಸರನೆ
ಹೊರಟು ಬರುವೆ

ಸರಸ್ವತಿ ದು.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

BOOK-POST

C.G. MANJULA
9, 3rd Cross
Markham Road
Ashok Nagar
BANGALORE- 560 025.




ವಿಳಾಸ :

" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067